ಶರಣ ಸಾಹಿತ್ಯ ಗ್ರಂಥಮಾಲಾ-೧೨.

## ಕನ್ನಡ ಕಲಿ

# ಸಿರುಮನ ಚರಿತೆ

★

ಲೇಖಕರು :

ಇತಿಹಾಸ ಸಂಶೋಧನಪ್ರವೀಣ

ಹುಲ್ಲೂರು ಶ್ರೀನಿವಾಸ ಜೋಯಿಸರು

★



ಪ್ರಕಾಶಕರು:

ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ

ಬ. ಶಿವಮೂರ್ತಿ ಶಾಸ್ತ್ರಿಗಳು

೧೯೫೧

# ಶರಣ ಸಾಹಿತ್ಯ ಗ್ರಂಥಮಾಲೆಯ

## ಪ್ರಕಟನೆಗಳು

| | | | |
|---|---|---|---|
| ೧. | ಪುರಾತನರ ತ್ರಿವಿಧಿ (ನಿಜಗುಣ ಶಿವಯೋಗಿ) | | ೧-೦-೦ |
| ೨. | ವೀರೇಶ ಚರಿತೆ (ರಾಘವಾಂಕ ಕವಿ) | | ೨-೦-೦ |
| ೩. | ಮನೋವಿಜಯಮ್ (ಗುರುಬಸವ ಕವಿ) | | ೨-೦-೦ |
| ೪. | ಬಸವೋದಾಹರಣಮ್ (ಪಾಲ್ಕುರಿಕೆ ಸೋಮನಾಥ) | | ೧-೦-೦ |
| ೫. | ಘನಲಿಂಗಿದೇವರ ವಚನ (ಘನಲಿಂಗಿದೇವರು) | | ೧-೦-೦ |
| ೬. | ತುರುಗಾಹಿ ರಾಮಣ್ಣ ವಚನ (ರಾಮಣ್ಣ) | | ೦-೪-೦ |
| ೭. | ಬಿಲ್ವಾಷ್ಟೋತ್ತರಮ್ | | ೦-೪-೦ |
| ೮. | ಸಂಕ್ಷಿಪ್ತ ಶಿವಪೂಜಾವಿಧಿ | (ಉತ್ತಮ ಪ್ರತಿ) | ೧-೦-೦ |
| | | (ಸಾಮಾನ್ಯ ಪ್ರತಿ) | ೦-೮-೦ |
| ೯. | ಯುಗವಾಣಿ (ಗದ್ಯ–ಪದ್ಯ ಸಂಗ್ರಹ) | | ೧-೦-೦ |
| ೧೦. | ಭಾರತ–ಚೀಣಾಗಳಲ್ಲಿ ಜನಜೀವನ | | ೦ ೮-೦ |
| ೧೧. | ನ್ಯಾಯ ಶತಕಮ್ (ರಾಮೇಶ್ವರಮುಖಿ) | | ೦-೧೨-೦ |
| ೧೨. | ಕನ್ನಡಕಲಿ ಸಿರುಮನ ಚರಿತೆ | | ೦-೧೨-೦ |

# ...ರ್ಥಿ ಗ್ರಂಥಮಾಲೆಯ

## ಪ್ರಕಟನೆಗಳು

| | | |
|---|---|---|
| ...ಸಂಗ್ರಹ) | | ೦-೪-೦ |
| ...ಕಾವ್ಯ ವಿಮರ್ಶೆ) | (ಉತ್ತಮ ಪ್ರತಿ) | ೧-೪-೦ |
| | (ಸಾಮಾನ್ಯ ಪ್ರತಿ) | ೧-೦-೦ |
| ...ಚರಿತ್ರೆ) | (ಉತ್ತಮ ಪ್ರತಿ) | ೧.೪-೧ |
| | (ಸಾಮಾನ್ಯ ಪ್ರತಿ) | ೧-೦-೦ |

ಶರಣ ಸಾಹಿತ್ಯ ಗ್ರಂಥಮಾಲಾ-೧೩.

# ಕನ್ನಡ ಕಲಿ
# ಸಿರುಮನ ಚರಿತೆ

★

ಲೇಖಕರು:
ಇತಿಹಾಸ ಸಂಶೋಧನಪ್ರವೀಣ
**ಹುಲ್ಲೂರು ಶ್ರೀನಿವಾಸ ಜೋಯಿಸರು**

★

ಪ್ರಕಾಶಕರು:
ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ
**ಬ. ಶಿವಮೂರ್ತಿ ಶಾಸ್ತ್ರಿಗಳು**

೧೯೫೧

# ಬಿನ್ನಹ

'ಕನ್ನಡ ನಾಡು ವೀರರ ಬೀಡು; ಸತಿಯರ ಮಾಡು; ದಾನಿಗಳ ಗೂಡು' ಎಂದು ಹೇಳುವ ಕವಿಗಳ ಉಕ್ತಿಯನ್ನು ಪ್ರಕೃತ ಗ್ರಂಥವಾದ 'ಕನ್ನಡ ಕಲಿ ಸಿರುಮನ ಚರಿತೆಯು'ಸ್ಪಷ್ಟಪಡಿಸುತ್ತದೆ. ಇದರಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿದ ಚಿತ್ರದುರ್ಗ ಜಿಲ್ಲಾ 'ಬೂದಿಹಾಳು' ಪಟ್ಟಣದಲ್ಲಿದ್ದ ಶೂರ ಪಾಳೆಯಗಾರನ ಮತ್ತು ಅವನ ಮಕ್ಕಳ ವೀರಪರಾಕ್ರಮವನ್ನು ಹೆಜ್ಜೆ ಹೆಜ್ಜೆಗೂ ನೋಡಬಹುದಾಗಿದೆ. ಈ ಚರಿತ್ರೆಯು ನಿಜಕ್ಕೂ ಕನ್ನಡಿಗರ ಹೆಮ್ಮೆಗೆ ಕಾರಣವಾಗಿದೆ.

ಸುಮಾರು ೨,೦೦೦ ವರ್ಷಗಳ ಕರ್ಣಾಟಕದ ಚರಿತ್ರೆಯಲ್ಲಿ ಕದಂಬರ ಮಯೂರಶರ್ಮ, ಚಾಲುಕ್ಯರ ಪುಲಿಕೇಶಿ, ಕಲ್ಯಾಣದ ವಿಕ್ರಮಾದಿತ್ಯ,ರಾಷ್ಟ್ರಕೂಟರ ಗೋವಿಂದ, ದ್ವಾರಸಮುದ್ರದ ವೀರಬಲ್ಲಾಳ, ವಿಜಯನಗರದ ಕೃಷ್ಣದೇವರಾಯ, ಬಿದನೂರಿನ ಶಿವಪ್ಪನಾಯಕ, ರಣಭೈರವಿಯಾದ ಅಕ್ಕಾದೇವಿ, ಕೆಳದಿಯ ಚೆನ್ನಮ್ಮ ರಾಣಿ, ಬೆಳವಡಿ ಮಲ್ಲಮ್ಮ, ಹಳೇಬೀಡಿನ ಕುಮಾರಲಕ್ಷ್ಮ, ಪರನಾರೀ ಸೋದರ ಕುಮಾರ ರಾಮ ಮೊದಲಾದ ಮಹಾ ವೀರಾಧಿವೀರರ ಹಾಗೂ ಧೀರಸ್ತ್ರೀಯರ ರಣ ಕೌಶಲವನ್ನು ಕುರಿತು ವಿಸ್ತಾರವಾಗಿ ಓದುತ್ತಿದ್ದೇವೆ. ಈ ಮಹಾ ಪರಾಕ್ರಮಿ ಗಳ ಪಂಕ್ತಿಯಲ್ಲಿಯೇ ಚರಿತ್ರನಾಯಕನಾದ ಸಿರುಮ ಮತ್ತು ಆತನ ಮಕ್ಕಳು ಕಾಚಯ್ಯ, ಮಲ್ಲಯ್ಯ ಮೊದಲಾದವರು ಪರಿಗಣಿತರಾಗಿದ್ದಾರೆ.

ಸಿರುಮ ಭೂಪತಿಯನ್ನು ಮೂಲ ಗ್ರಂಥಕಾರನು 'ಗೊಲ್ಲ ಸಿರುಮ, ಗುರುಲಿಂಗ ಜಂಗಮಭಕ್ತ, ಸೋಮೇಶ ಪೂಜಾಸಕ್ತ' ಎಂದು ಮೊದಲಾಗಿ ಬಣ್ಣಿಸಿರುವುದರಿಂದ ಇವನು ಶಿವಭಕ್ತನಾದ ಪಾಳೆಯಗಾರನಾಗಿರಬೇಕೆಂದೂ, ಇವನಿಗೆ ಯಾವನೋ ಮಹಾತ್ಮನಾದ ವೀರಶೈವ ಗುರುವಿನಲ್ಲಿ ಶ್ರದ್ಧಾಸಕ್ತಿಗಳು ಇದ್ದಿರಬೇಕೆಂದೂ, ಇವನು ಉಜ್ವಲ ಶಿವಭಕ್ತನಾಗಿದ್ದುದರಿಂದಲೇ ಮೂಲ ಗ್ರಂಥಕರ್ತೃವಾದ ಕವಿಯು ಸಿರುಮ ಮತ್ತು ಅವನ ಮಕ್ಕಳಿಗೆ ಮರಣಾನಂತರ ಗಣಪದವಿಯನ್ನು ಕೊಟ್ಟಿರಬೇಕೆಂದೂ ಊಹಿಸಬೇಕಾಗುತ್ತದೆ.

ಈ ಗ್ರಂಥದಲ್ಲಿ ನಮ್ಮ ನಾಡಿನ ಹಿಂದಣ ಕಾಲದ ಜನಗಳ ನಡೆನುಡಿಗಳನ್ನೂ, ರಾಜರುಗಳ ಸತ್ಯ ಪರಾಕ್ರಮವನ್ನೂ, ಸ್ತ್ರೀಯರ ಪಾತಿವ್ರತ್ಯ ನಿಷ್ಠೆಯನ್ನೂ ಅರಿ ಯಲು ಒಳ್ಳೆಯ ಸನ್ನಿವೇಶಗಳು ಕಂಡುಬರುತ್ತವೆ. ಯುದ್ಧದಲ್ಲಿ ಸತ್ತವರಿಗೆ ಸ್ವರ್ಗವಾಗುತ್ತದೆ, ಗಂಡನು ಯುದ್ಧದಲ್ಲಿ ಸತ್ತರೆ ಹೆಂಡತಿಯು ಸಹಗಮನ ಮಾಡಬೇಕು, ನಂಬಿದವರನ್ನು ವಂಚಿಸಬಾರದು, ರಣದಲ್ಲಿ ಮುಂದಿಟ್ಟ ಹೆಜ್ಜೆಯನ್ನು ಹಿಂದೆಗೆಯಬಾರದು, ಗೆದ್ದವರು ಸೋತವರನ್ನು ಗೌರವದಿಂದ ನೋಡಿಕೊಳ್ಳಬೇಕು, ರಾಜರು ಪ್ರಜೆಗಳನ್ನು ಧರ್ಮದಿಂದ ರಕ್ಷಿಸಬೇಕು ಇತ್ಯಾದಿ ಸದ್ಗುಣಗಳಿಂದ ನಮ್ಮ ಕನ್ನಡ ಜನ ಕೂಡಿದ್ದರೆಂದು ಈ ಗ್ರಂಥದಿಂದ ಅರಿಯಬಹುದು.

ಈ ಸಿರುಮನ ಚರಿತೆಯು ವೀರ ಮತ್ತು ಕರುಣರಸಗಳಿಂದ ಕೂಡಿದೆ. ಈ ಕಥಾವಸ್ತುವಿನಿಂದ ಪ್ರತಿಭಾಶಾಲಿಯಾದ ಕವಿಯು ದುರಂತ ನಾಟಕವೊಂದನ್ನು

ರಚಿಸಬಹುದು. ಸಿರುಮನ ಮಕ್ಕಳೈವರ ಪರಾಕ್ರಮವು ಮಹಾ ಭಾರತದ ಪಾಂಡವರೈವರ ಕೆಚ್ಚೆದೆಯ ನೆನಪನ್ನು ತರುತ್ತದೆ. ನಮ್ಮ ದೇಶದ ಹಿಂದಿನ ರಾಜರುಗಳು ಹೇಗೆ ಪರಸ್ಪರ ದ್ವೇಷಾಸೂಯೆಗಳಿಂದ ಹೊಡೆದಾಡುತ್ತಿದ್ದರೆಂಬುದನ್ನೂ, ಬಲವಂತರು ದುರ್ಬಲರ ಗೋಣನ್ನು ಎಷ್ಟು ಬಿರುಸಾಗಿ ಮುರಿಯುತ್ತಿದ್ದರೆಂಬುದನ್ನೂ ಈ ಪುಸ್ತಕದಲ್ಲಿ ಅರಿಯಲು ನಿದರ್ಶನಗಳಿವೆ.

'ಬೂದಿಹಾಳು' ಈಗ ಚಿತ್ರದುರ್ಗ ಜಿಲ್ಲೆಯ ಒಂದು ಸಾಮಾನ್ಯವಾದ ಗ್ರಾಮವೆನಿಸಿದೆ. ಈಗಲೂ ಅಲ್ಲಿ ಹಾಳುಬಿದ್ದಿರುವ ಕೋಟೆ ಕೊತ್ತಲಗಳನ್ನೂ, ಗುಡಿಗೋಪುರಗಳನ್ನೂ, ವೀರಗಲ್ಲುಗಳನ್ನೂ ಕಾಣಬಹುದು. ದರ್ಶನ ಮಾತ್ರದಿಂದಲೇ ಬೂದಿಹಾಳು ತನ್ನ ಗತವೈಭವವನ್ನು ಮೌನದಿಂದ ಸಾರುತ್ತಾ ಪ್ರೇಕ್ಷಕರ ಕಣ್ಣುಗಳಲ್ಲಿ ನೀರು ತುಂಬುವಂತೆ ಮಾಡುತ್ತದೆ. ಅಲ್ಲಿ ಸೋಮೇಶನ ಗುಡಿ, ಕುಮಾರ ಮಲ್ಲಯ್ಯನ ಗುಡಿ ಹಿಂದಿನ ಸ್ಮಾರಕಗಳಾಗಿ ನಿಂತಿವೆ. ಬೂದಿಹಾಳಿಗೆ ಅನತಿ ದೂರದಲ್ಲಿ ಬಾಗೂರು ಕೋಟೆಯಿದೆ.

ಹಳೇಬೀಡು, ಹಾಳುಹಂಪೆ, ತಲಕಾಡು, ಬಸರಾಳು, ಕಲ್ಯಾಣ, ಮಳಖೇಡ, ಕೆಳದಿ, ಬಿದನೂರು, ಸ್ವಾದಿ, ಬೆಳಗಿ, ಮಡಕೇರಿ, ಶ್ರೀರಂಗಪಟ್ಟಣ, ಬಿಜ್ಜಾವರ, ಹಾಗಲ್ವಾಡಿ, ಮಣ್ಣೆ, ಬನವಾಸಿ, ಬಾದಾಮಿ, ಮುಳಬಾಗಿಲು ಮೊದಲಾದ ಕರ್ಣಾಟಕದ ಪ್ರಾಚೀನ ರಾಜಧಾನಿಗಳ ಅವಲೋಕನದಿಂದ ಆಗುವ ಪರಿಣಾಮವೇ ಇಂದಿನ ಬೂದಿಹಾಳಿನ ಸಂದರ್ಶನದಿಂದಲೂ ಆಗುತ್ತದೆ. ಇಂತಹ ಐತಿಹಾಸಿಕ ಸ್ಥಳಗಳ ಹೆಸರುಗಳನ್ನು ಬದಲಾಯಿಸುವಾಗ ಸಾರ್ವಜನಿಕರೂ, ಸರ್ಕಾರದವರೂ ಚೆನ್ನಾಗಿ ಪರಿಶೀಲಿಸಿ ಮುಂದುವರಿಯುವುದು ಅಗತ್ಯವೆಂದು ಹೇಳಬೇಕಾಗಿದೆ. ಈಗ ಬೂದಿಹಾಳು 'ಶ್ರೀರಾಮಪುರ' ಎನಿಸಿದೆ.

'ಶರಣ ಸಾಹಿತ್ಯ'ದ ಅಭಿಮಾನಿಗಳೂ, ಇತಿಹಾಸ ಸಂಶೋಧನ ಪ್ರವೀಣರೂ, ಚಿತ್ರದುರ್ಗದ ವಕೀಲರೂ ಆದ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು 'ಶರಣ ಸಾಹಿತ್ಯ' ಮಾಸಿಕದಲ್ಲಿ ಪ್ರಕಟಿಸುವ ಸಲುವಾಗಿ ನಮಗೆ ಈ ಕಥೆಯನ್ನು ಕಳುಹಿಸಿಕೊಟ್ಟರು. ಈ ಕಥೆಯ ಮೂಲವು 'ಸಾಂಗತ್ಯ ಕಾವ್ಯ'ದಲ್ಲಿದೆ. ಕಥೆಯು ಸ್ವಾರಸ್ಯವಾಗಿಯೂ, ಉಪಯುಕ್ತವಾಗಿಯೂ ಇದ್ದುದರಿಂದ ನಾವು ಅದನ್ನು ಪ್ರತ್ಯೇಕವಾಗಿ ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಿದೆವು. ಇದರ ಪ್ರಯೋಜನ ಪಡೆಯುವ ಭಾರ ಗುಣಜ್ಞರಾದ ಕನ್ನಡ ಜನರನ್ನು ಅವಲಂಬಿಸಿದೆ.

ಇಂತು,
ಬ. ಶಿವಮೂರ್ತಿಶಾಸ್ತ್ರೀ
ಸಂಪಾದಕ.

'ಶರಣ ಸಾಹಿತ್ಯ ಕಾರ್ಯಾಲಯ'
ದಿನಾಂಕ: ೧೦-೭-೧೯೫೧.

# ಪೀಠಿಕೆ

ಈಗ ಹಲವು ಶತಮಾನಗಳಿಂದ ಪರಕೀಯರ ಬಂಧನದಲ್ಲಿ ಬಾಳಿದ ನಮಗೆ ನಮ್ಮ ಪೂರ್ವಿಕರ ನೈಜವಾದ ಇತಿಹಾಸವೇ ಮರೆತುಹೋಗಿದೆ. ನಮ್ಮತನವನ್ನು ಮರೆತಿದ್ದೇವೆ. ಅಷ್ಟೇ ಅಲ್ಲ, ಭಾರತೀಯರಿಗೆ ನಿಶ್ಚಿತವಾದ ಚರಿತ್ರೆಯೇ ತಿಳಿಯದು ಎಂಬುವಷ್ಟರಮಟ್ಟಿನ ಅಭಿಪ್ರಾಯವೂ ಹಲವರಲ್ಲಿ ಮೂಡಿದೆ. ಇದು ಸತ್ಯದಿಂದ ದೂರವಾದುದು. ಅರ್ಥಶಾಸ್ತ್ರ ನಿಪುಣನಾದ ಕೌಟಿಲ್ಯನ ಕಾಲಕ್ಕೆ ಮುಂಚೆಯೇ ರಾಜಕುಮಾರರು ಪ್ರತಿನಿತ್ಯವೂ ಇತಿಹಾಸವನ್ನು ಕೆಲವು ಗಂಟೆಗಳ ಕಾಲವಾದರೂ ಅಭ್ಯಾಸ ಮಾಡಲೇಬೇಕೆಂಬ ನಿರ್ಬಂಧವಿತ್ತು. ವಿಜಯನಗರದ ರಾಜ್ಯಸ್ಥಾಪನೆಗೆ ಮುನ್ನವೂ ರಾಜಕುಮಾರರು:—

ಸಾಂ॥ ಭಾರತ ರಾಮಾಯಣ ಚೋರತನದ ಕಥೆ
ಕಾರ್ಯ ಕದನಗಳು ಜೈಮಿನಿಯಾ ।
ಕೇಳುತ ಬಾಲಕರಿಗೆ ಜೀವಪಲ್ಲಟವಾಗಿ
ಮಾಡಬೇಕವರಂತೆ ನಾವೂ॥

ಎಂದು ವಿದ್ಯಾಭ್ಯಾಸ ಮಾಡುತ್ತಿದ್ದರು. ಶಿವಾಜಿಯೂ ಇಂತಹ ಚರಿತ್ರೆಯನ್ನು ಪಠಿಸಿ ದುದರಿಂದಲೇ ಹಿಂದೂ ಸಾಮ್ರಾಜ್ಯದ ಉದ್ಧಾರಕನಾಗಿ ಛತ್ರಪತಿಯಾದನು.

ಕನ್ನಡದ ಸೋದರ ಭಾಷೆಗಳಲ್ಲಿರುವುದಕ್ಕಿಂತ ಕನ್ನಡದಲ್ಲಿ ಚಾರಿತ್ರಕ ಗ್ರಂಥ ಗಳು ಬಹು ಕಮ್ಮಿ ಇವೆ ಎಂಬ ಭಾವನೆಯೂ ಮೂಡಿದೆ. ಇದು ಸತ್ಯದಿಂದ ದೂರವಾ ದುದು. ಕನ್ನಡ ಗ್ರಂಥಗಳಿಂದ ಚಾರಿತ್ರಕ ವಿಷಯಗಳನ್ನು ಹೆಚ್ಚಾಗಿ ಸಂಗ್ರಹಿಸಲು ಸಾಕಾದಷ್ಟು ಪ್ರಯತ್ನ ಮಾಡಿಲ್ಲವೆಂಬುದನ್ನು ಮಾತ್ರ ಒಪ್ಪಿಕೊಳ್ಳಬೇಕಾಗಿದೆ.* ಕನ್ನಡದಲ್ಲಿ ಚರಿತ್ರೆಗಳನ್ನು ಹುಡುಕುತ್ತಾ ಇದ್ದಾಗ ಕೆಲವು ಸಾಂಗತ್ಯ ಗ್ರಂಥಗಳು‡ ನನಗೆ ದೊರೆತುವು. ಅವುಗಳಲ್ಲಿ 'ಕೆಂಚಶೆಟ್ಟಿಯ ರಾಮು' ಎಂಬ ಕವಿಯು ರಚಿಸಿದ ಸಿರು ಮನ ಚರಿತೆಯೂ ಒಂದು. ಈ ಸಾಂಗತ್ಯವನ್ನು ಅನುಸರಿಸಿ ಸರಳವಾದ ಗದ್ಯದಲ್ಲಿ ಈ ಕನ್ನಡಕಲಿ ಸಿರುಮನ ಚರಿತೆಯನ್ನು ಬರೆದಿರುತ್ತೇನೆ.

---

* MAR. 1929 P 36.

‡ ನನಗೆ ದೊರೆತಿರುವ ಇತರ ಸಾಂಗತ್ಯ ಗ್ರಂಥಗಳು ನಾಗಸಂಗಯ್ಯನ ಪರನಾರಿಯ ರಿಗೆ ಸಹೋದರನೆಂಬ ಕತೆ, ಮಹಾಲಿಂಗಸ್ವಾಮಿಯ 'ಬಾಲಕುಮಾರ ರಾಮನ ಸಾಂಗತ್ಯ', ಕನ್ನಡ ಕವಿಜಾಣ ಗಂಗಯ್ಯ ಕೃತ ಚನ್ನರಾಮನ ಕೃತಿ ಮತ್ತು ಚಿನ್ನಭುಜಂಗೇಶನ ಪುತ್ರ ಗಂಗಯ್ಯ ಕೃತ 'ಪರನಾರಿಯ ಸಹೋದರನೆಂಬ ಕುಮಾರ ರಾಮನ ಕತೆ' ಎಂಬ ನಾಲ್ಕು ಗ್ರಂಥಗಳು. ಇವುಗಳೊಡನೆ ಸಿರುಮನ ಚರಿತೆಯೂ ದೊರೆತಿದೆ.

ಸಾಂಗತ್ಯದಲ್ಲಿ ರಚಿತವಾಗಿರುವ ಸಿರುಮನಚರಿತೆಯು, ಕವಿ ಚರಿತೆಗಾರರಿಗಾಗಲಿ ಕವಿಚರಿತೆಗಳನ್ನು ವಿವರಿಸಿರುವ ಇತರರಿಗಾಗಲಿ ದೊರೆತಿರುವಂತೆ ಕಾಣುವುದಿಲ್ಲ. ಈ ಕವಿ ರಾಮನ ಹೆಸರು ಎಲ್ಲಿಯೂ ಉಕ್ತವಾಗಿಲ್ಲ.

ಸಾಂ॥ ಪಂಚಾಮು ಕುಲವಾರ್ಧಿ ಚಂದಿರ ನೆನಿಸುವಾ।
ಪಂಚಮುಖನ ಭಕ್ತಿಯುತನೂ।
ಕೆಂಚಶೆಟ್ಟಿಯ ಸುತ ರಾಮು ಪೇಳಿದ ಕೃತಿ।
ಯಂ ಚದುರರು ಲಾಲಿಪುದು ॥ಸಂಧಿ ೧. ಪದ ೧೧ ॥

## ಕವಿ ಮತ್ತು ಕಾವ್ಯ ವಿಚಾರ

ಕುಮಾರರಾಮನ ಚರಿತ್ರೆಯನ್ನು ಶೋಧಿಸಲು ಗ್ರಂಥಗಳನ್ನು ಹುಡುಕುವ ಪ್ರಯತ್ನದಲ್ಲಿ ನನಗೆ ದೊರೆಕಿದ ಒಂದು ಕೈ ಬರೆಹದ ಪ್ರತಿಯಲ್ಲಿ ಕನ್ನಡ ಕವಿ ಜಾಣ ಗಂಗಯ್ಯ ಕೃತ ಚನ್ನರಾಮನ ಕೃತಿಯೂ (ಕುಮಾರ ರಾಮನ ಸಾಂಗತ್ಯ) ಕೆಂಚ ಶೆಟ್ಟಿಯ ಮಗ ರಾಮ ಪೇಳಿದ ಸಿರುಮನ ಚರಿತೆಯೂ ಇರುವುವು.

ಕೆಂಚಶೆಟ್ಟಿಯ ಸುತ ರಾಮುಕವಿಯು ಗ್ರಂಥಾವತಾರದಲ್ಲಿ ಬೂದಿಹಾಳು ವಾಸಿ ಸೋಮೇಶನನ್ನೂ, ಬಳಿಕ ಶರ್ವಾಣಿ, ವಿಘ್ನೇಶ, ಸರಸ್ವತಿಯರನ್ನೂ ಸ್ತುತಿಸಿರುವನು. ಪೂರ್ವಕವಿಗಳಲ್ಲಿ ಚಮತ್ಕಾರದಿಂದ ಅನೇಕ ಗ್ರಂಥಗಳನ್ನು ರಚಿಸಿ ವಿರೂಪಾಕ್ಷನೊಳ ಗೈಕ್ಯಪಡೆದ ಗುರು ಹರಿದೇವನಡಿಗೆರಗಿ, ಬಳಿಕ, ಕೇಶಿರಾಜ, ಮಲುಹಣ, ಉದ್ಭಟ, ಕಾಳಿದಾಸ, ಮಯೂರ, ಬಾಣ, ರಾಘವಾಂಕ ಮುಂತಾದ ಶಿವ ಕವಿಗಳನ್ನು ವಂದಿಸಿರು ವನು. ನರ ಕೃತಿಯನ್ನು ಮಾಡುವುದಿಲ್ಲವೆಂದು ಹಟಮಾಡಿದ ಚಾಮರಸ, ಷಡಕ್ಷರ ಕವಿ ಮುಂತಾದ ವೀರಶೈವ ಕವಿಗಳ ಗುಂಪಿಗೆ ಸೇರಿದ ರಾಮ ಕವಿಯು ಗುರುಲಿಂಗ ಜಂಗಮ ಸೇವಕನಾದ ಸಿರುಮನನ್ನು ಬೇರೆ ಎನ್ನಲಾಗದು; ಶಿವಭಕ್ತನ ಕಥೆಯನ್ನು ರಚಿಸು ಎಂದು ನುಡಿದ ಗುರುವಿನಾಜ್ಞೆಯನ್ನು ಕೈಗೊಂಡು ಸಂತೋಷವನ್ನುಂಟು ಮಾಡುವ ಕಂತುಹರನ ಭಕ್ತನಾದ ಸಿರುಮನ ಚರಿತ್ರೆಯನ್ನು ವಿವರಿಸುವೆನು ಎಂದು ಹೇಳಿಕೊಂಡಿರುವನು. ಮಹಾಸಾಹಸಿಯೂ, ಸತ್ಯವಂತನೂ, ಸೋಮೇಶನ ಭಕ್ತನೂ ಆದ ಸಿರುಮನು ನಿಜವಾದ ಶಿವಶರಣರ ಪಂಕ್ತಿಗೆ ಸೇರಿದವನು. ಕಾವ್ಯಕ್ಕಿಂತಲೂ ಇದರಲ್ಲಿ ಚರಿತ್ರಾಂಶವೇ ಹೆಚ್ಚಾಗಿದೆ. ಚರಿತ್ರೆಯ ದೃಷ್ಟಿಯಿಂದ ಇದು ಶ್ರೇಷ್ಠವಾದ ಗ್ರಂಥ. ಕವಿಯೇ ಇದನ್ನು 'ಚರಿತೆ' ಎಂದು ಕರೆದಿರುವನು. ಅಂದಿನ ಜನಜೀವನವು ಯಥಾವತ್ತಾಗಿ ಇದರಲ್ಲಿ ಚಿತ್ರಿತವಾಗಿದೆ. ಇದಕ್ಕೆ ಚೆನ್ನ ಮಲ್ಲನ ಕೃತಿ ಎಂಬ ಮತ್ತೊಂದು ಹೆಸರುಂಟು.

ಸಾಂ॥ ಇನ್ನು ಹೇಳುವೆ ಚೆನ್ನಮಲ್ಲನ ಕೃತಿಯನು
ಚೆನ್ನಾಗಿ ಕೇಳಿ ಸಜ್ಜನರು ।
ಮುನ್ನಿನ ಪಾಂಡವ ಶೌರ್ಯದ ಪಂಥವ।
ಬಣ್ಣಿಸುವೆನು ಧರೆಯೊಳಗೆ ॥೧_೧೬॥

ಸಿರುಮನ ಎರಡನೆಯ ಕುಮಾರನಾದ ಕುಮಾರಮಲ್ಲಯ್ಯನು ಅರ್ಜುನನಂತೆ ಶೌರ್ಯದಿಂದ ಕಾದಾಡಿರುವುದರಿಂದ ಅವನ ಹೆಸರಿನಲ್ಲಿ ಚೆನ್ನಮಲ್ಲನ ಕೃತಿ ಎಂದು ಕವಿಯು ಹೇಳಿದಂತೆ ಕಾಣುತ್ತದೆ.

ಈ ಕೃತಿಯು

ಸಾಂ॥ ಲೋಲರಮೆಚ್ಚು ಪಾಲಿಸುವವರಿಗೊಂದಚ್ಚು
ಮೈಲಾರಿ ಹೆಸರಿಗೆ ಹುಚ್ಚು ।
ಲಾಲಿಸಿ ಕೇಳ್ವ ಕೋವಿದ ಜಾಣರಿಗೆ ಮೆಚ್ಚು ।
ಭೂಲೋಕದೊಳಗೆ ಈ ಕೃತಿಯು ॥೧_೧೫॥

ಎಂದು ತನ್ನ ಕವಿತಾಚಾತುರ್ಯವನ್ನು ಕವಿ ಹೇಳಿಕೊಂಡಿರುವನು. ಈ ಮೇಲೆ ಉಕ್ತವಾಗಿರುವ ಎರಡು ಪದಗಳು ಇದೇ ಕೈಬರೆಹದ ಗ್ರಂಥದಲ್ಲಿರುವ ಕುಮಾರ ರಾಮನ ಸಾಂಗತ್ಯದಲ್ಲಿಯೂ ಉಕ್ತವಾಗಿವೆ. ಅಲ್ಲದೆ ಈ ರಾಮಕವಿಯು ಬೂದಿಹಾಳು ಕೋಟೆಯನ್ನು ಕುಮಾರರಾಮನ ರಾಜಧಾನಿಯಾಗಿದ್ದ ಕುಮ್ಮಟದುರ್ಗಕ್ಕೆ ಹೋಲಿಸಿರುವನು. ಈ ಅಂಶಗಳಿಂದ ರಾಮಕವಿಯು ಕುಮಾರರಾಮನ ಸಾಂಗತ್ಯವನ್ನು ಓದಿ ಸ್ಫೂರ್ತಿಗೊಂಡು ಈ ಸಿರುಮನ ಚರಿತೆಯನ್ನು ರಚಿಸಿದಂತೆ ಸೂಚಿತವಾಗುವುದು. ಈ ಚರಿತ್ರೆಯೊಳಗೆ ತಪ್ಪುಗಳಿದ್ದರೆ ಸುಜನರು ನನ್ನಲ್ಲಿರುವ ತಪ್ಪನ್ನು ತಿದ್ದಿಕೊಂಡು ಓದಬೇಕೆಂದು ವಿನಯದಿಂದ ಪ್ರಾರ್ಥಿಸಿಕೊಂಡಿರುವನು.

ಇದರಲ್ಲಿ ೧೩ ಸಂಧಿಗಳೂ ೧೧೬೫ ಪದ್ಯಗಳೂ ಇರುವುದಾಗಿ ಹೇಳಿದೆ. ಆದರೆ ಸುಮಾರು ೮೦ ಪದ್ಯಗಳು ಕಮ್ಮಿಯಾಗಿವೆ.

ಸಿದ್ಧ ಎಂಬ ಕವಿಯು ಕ್ರಿ. ಶ. ಸು. ೧೭೦೦ **ಸಿರುಮನ ಸಾಂಗತ್ಯ** ಎಂಬ ಒಂದು ಗ್ರಂಥವನ್ನು ಬರೆದಿರುವಂತೆ ಕವಿಚರಿತೆಯಲ್ಲಿ ಹೇಳಿದೆ. (ಭಾಗ ೨. ಪುಟ ೫೫೬) ಅದರಲ್ಲಿ ಶಿವಭಕ್ತನಾದ ಗೊಲ್ಲ ಸಿರುಮನ ಕಥೆ ಹೇಳಿದೆ. (ಸಂಧಿ ೫. ಪದ್ಯ ೬೨೬.)

## ಕಥಾ ಸಾರಾಂಶ

ಚಿತ್ರದುರ್ಗದ ಜಿಲ್ಲೆಯಲ್ಲಿರುವ 'ಬೂದಿಹಾಳು' ಎಂಬ ಗ್ರಾಮವು ವಿಜಯನಗರದರಸರ ಕಾಲದಲ್ಲಿ ಒಂದು ಸಣ್ಣ ಪಾಳೆಯಪಟ್ಟಾಗಿತ್ತು. ಅಲ್ಲಿ ಗೊಲ್ಲರ ಸಿರುಮ ಎಂಬ ರಾಜನು ಆಳುತ್ತಾ ಇದ್ದು ಸುತ್ತಲಿನ ಪಾಳೆಯಗಾರರಿಗೆ ಮೃತ್ಯುವಾಗಿದ್ದನು. ಅವನ ವಿರೋಧಿಗಳಾದ ಹಿರಿಸೂರು ಮೊದಲಾದ ಪಾಳೆಯಗಾರರು ಚಂದ್ರಗಿರಿಯಲ್ಲಿ

ಆಳುತ್ತಿದ್ದ ಸಾಳುವ ನರಸಿಂಗರಾಯನನ್ನು ಅಪಾರವಾದ ಸೇನೆಯೊಡನೆ ಕರೆದು ಕೊಂಡು ಬಂದು ಸಿರುಮನ ರಾಜ್ಯವನ್ನು ಮುತ್ತಿದರು. ಸಿರುಮನು ಕೊನೆಯ ವರೆಗೂ ಕಲಿತನದಿಂದ ಹೋರಾಡಿದನು. ಅವನೂ ಅವನ ನಾಲ್ಕು ಜನ ವೀರಸುತರೂ ಕಲಿಗಳಾಗಿ ಕಾದಾಡಿ ಮಡಿದರು. ಈ ಯುದ್ಧಪ್ರಸಂಗವೇ ಈ ಸಾಂಗತ್ಯದ ಕಥಾ ವಸ್ತುವಾಗಿರುವುದು.

## ಬೂದಿಹಾಳು

ಚಿತ್ರದುರ್ಗದ ಜಿಲ್ಲೆಯಲ್ಲಿ **ಬೂದಿಹಾಳು** ಎಂಬ ಹೆಸರಿನ ಅನೇಕ ಹಳ್ಳಿಗಳಿವೆ. ಒಮ್ಮೆ ಇವು ಹರಪುರಿಗಳಾಗಿದ್ದಂತೆ ಕಾಣುತ್ತದೆ. ಪ್ರಸಕ್ತ ಬೂದಿಹಾಳು ಹೊಸ ದುರ್ಗದಿಂದ ಹುಳಿಯಾರಿಗೆ ಹೋಗುವ ರಾಜ ಮಾರ್ಗದಲ್ಲಿ ೧೬ನೇ ಮೈಲಿಯ ಬಳಿ ಇದೆ. ಈ ಚರಿತೆಯಲ್ಲಿಯೂ ಶಾಸನಗಳಲ್ಲಿಯೂ ಈ ಊರಿಗೆ ಬೂದಿಹಾಳು, ಬೂದಿ ಪುರ, ವಿಭೂತಿಪುರ ಮುಂತಾದ ಹೆಸರುಗಳು ಉಕ್ತವಾಗಿವೆ. ಹೊಯಿಸಳರು ಮತ್ತು ವಿಜಯನಗರದರಸರ ಕಾಲದಲ್ಲಿ ಹುಳಿಯಾರು ಮತ್ತು ಚಿಕ್ಕನಾಯಕನ ಹಳ್ಳಿಗಳ ಸುತ್ತಲೂ ಇರುವ ಪ್ರದೇಶಕ್ಕೆ **ಮಗರಮುನ್ನೂರುನಾಡು** ಅಥವಾ **ಮಕರ ಚೇಂಕೆಯು** ಎಂದು ಹೆಸರಿತ್ತು. ಆಗ ಬೂದಿಹಾಳು ಸೀಮೆಯು ಮಗರ ರಾಜ್ಯದ ಭಾಗವಾಗಿತ್ತು. ಕ್ರಿ. ಶ. ೧೫ನೇ ಶತಮಾನದ ಮಧ್ಯಭಾಗದಲ್ಲಿ **ಗೊಲ್ಲ ಸಿರುಮ ನೃಪಾಲನು** ಬೂದಿಹಾಳಿಗೆ ಅಧಿಪತಿಯಾಗಿದ್ದನು. ಆಗ ಈ ಕೋಟೆಯನ್ನು ಯುವ ರಾಜ ಕಾಚೇಂದ್ರನು ೨೦೦ ಕುದರೆ, ೧೦೦೦೦ ಕಾಲು ಬಲದ ಸಹಾಯದಿಂದ ರಕ್ಷಿಸು ತ್ತಿದ್ದನು. ಕಾಚ ಮತ್ತು ಇವನ ನಾಲ್ವರು ಸಹೋದರರು ಪಂಚ ಪಾಂಡವರಂತೆ ಧೀರರಾಗಿಯೂ ಸತ್ಯ ಶೀಲರಾಗಿಯೂ ಶೋಭಿಸಿದರು. ಬೂದಿಹಾಳು ಪತನವಾದ ಮೇಲೆ ಕಿರಿಯ ಮಗ ಸೋಮಯ್ಯನು ಪುನರುದ್ಧಾರಮಾಡಿ ರಾಜ್ಯಭಾರಮಾಡಿದನು.

ವಿಜಯನಗರದ ನರಪತಿ ಸದಾಶಿವರಾಯನು ಶ್ರೀಪತಿರಾಯನನ್ನು ಕ್ರಿ. ಶ. ೧೫೫೪ಕ್ಕೆ ಮುಂಚೆ ಅಮರ ನಾಯಕನನ್ನಾಗಿ ನೇಮಿಸಿದನು. ಶ್ರೀಪತಿ, ಇವನ ಮಗ ರಂಗರಾಜಯ್ಯ, ಬಳಿಕ ಇವನ ಮಗ ವಲ್ಲಭರಾಜಯ್ಯ ಇವರುಗಳು ಬೂದಿಹಾಳಿನಲ್ಲಿ ಸುಮಾರು ೪೦ ವರ್ಷ ಅಮರನಾಯಕರಾಗಿ ಆಳಿದಂತೆ ಕಂಡು ಬಂದಿದೆ. ಕ್ರಿ. ಶ. ೧೭ ನೆಯ ಶತಮಾನದಲ್ಲಿ ಸಂತೇ ಬೆನ್ನೂರು ನಿತ್ಯಮದವಣಿಗ ಪುವ್ವಲ ವೀರ ಹನು ಮಪ್ಪ ಅಮರನಾಯಕನಾದನು. ಸಂತೇಬೆನ್ನೂರು ಪಾಳೆಯಗಾರರಿಂದ ಬಿಜಾಪುರದ ಸುಲ್ತಾನರು ಆಕ್ರಮಣಮಾಡಿದರು. ಅವರಿಂದ ದೆಹಲಿಯ ಸುಲ್ತಾನ ಔರಂಗಜೇಬನು ಬೂದಿಹಾಳನ್ನು ೧೬೮೭ರಲ್ಲಿ ಆಕ್ರಮಿಸಿಕೊಂಡು ಸೀರ್ಯದ ಸುಬೆಗೆ ಸೇರಿಸಿ ದನು. ಸೀರ್ಯಕ್ಕೆ ಸೇರಿನ ಏಳು ಪರಗಣಗಳಲ್ಲಿ ಬೂದಿಹಾಳು ಒಂದಾಗಿತ್ತು. ಬಳಿಕ ಇದು ಚಿತ್ರದುರ್ಗದ ಪಾಳೆಯಗಾರರ ವಶಕ್ಕೆ ಸೇರಿತು. ಆಗ ಇದಕ್ಕೆ **ಗಿರಿಜಾನಗರ**

ಎಂದು ಹೆಸರಿಟ್ಟರು. ಅನಂತರ ಪೇಷ್ವೆಗಳು ಕೆಲಕಾಲ ಸ್ವಾಧೀನ ಹೊಂದಿದ್ದರು. ಬಳಿಕ ೧೭೬೩ ರಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿತು. ೧೮೩೧ರಲ್ಲಿ ದಂಗೆ ಎದ್ದಾಗ ಬೂದಿಹಾಳು ಭಾಗ ವಹಿಸಿತ್ತು. ಈ ಬೂದಿಹಾಳು ಸುತ್ತಲೂ ತೆಂಗಿನ ಫಸಲು ವಿಶೇಷವಾಗಿರುವುದರಿಂದ 'ಕಾಯಿ ಬೂದಿಹಾಳು' ಎಂದು ಹೆಸರು ಬಂದಿದೆ. ಈಗ ಈ ಹೆಸರೂ ಬದಲಾಗಿ ಶ್ರೀರಾಮಪುರ ಎಂಬ ಪುಣ್ಯನಾಮದಿಂದ ಶೋಭಿಸುತ್ತದೆ.

## ಕಾಳಗದ ಕಾಲ ಮತ್ತು ಇತರ ವಿಷಯಗಳು

**ಬೂದಿಹಾಳು ರಾಜ ಸಿರುಮ ಭೂವರನು** ಯಾವಾಗ ರಾಜ್ಯಭಾರ ಮಾಡುತ್ತಿದ್ದನು ಎಂಬುದನ್ನು ನಿರ್ಧರಿಸಬೇಕಾಗಿದೆ. ಇದಕ್ಕಾಗಿ ಅಂದಿನ ಕಾಲದ ವಿಜಯನಗರದ ಇತಿಹಾಸದ ಕಡೆಗೆ ಲಕ್ಷ್ಯಕೊಡುವುದು ಆವಶ್ಯಕ. ವಿಜಯನಗರದ ಸಂಗಮವಂಶದ ಕೊನೆಯ ಸಾಮ್ರಾಟರು ಅಷ್ಟು ಶಕ್ತರಾದವರಲ್ಲ. ಮಲ್ಲಿಕಾರ್ಜುನನು ಕ್ರಿ. ಶ. ೧೪೪೬ರಿಂದ ೧೪೬೫ರ ವರೆಗೆ ಆಳಿದನು. ಕೇಂದ್ರ ರಾಜ್ಯಾಡಳಿತದಲ್ಲಿ ಬಿಗಿ ತಪ್ಪಿತ್ತು. ರಾಜ್ಯ ಕ್ರಾಂತಿಯ ಫಲವಾಗಿ ಮಲ್ಲಿಕಾರ್ಜುನನ ಚಿಕ್ಕಪ್ಪನ ಮಗನಾದ ಮುಮ್ಮಡಿ ವಿರೂಪಾಕ್ಷನು ೧೪೬೫ರಲ್ಲಿ ಮಲ್ಲಿಕಾರ್ಜುನನನ್ನು ವಿಜಯನಗರದಿಂದೋಡಿಸಿ ಚಕ್ರವರ್ತಿ ಎಂಬ ಹೆಸರಿನಿಂದಲೇ ರಾಜ್ಯಭಾರ ಮಾಡಿದನು. ಇವನ ಆಡಳಿತದಲ್ಲಿಯೂ ಭದ್ರವಾದ ಕೇಂದ್ರ ಸರಕಾರದ ಅಭಾವದಿಂದ ಸಣ್ಣ ಪುಟ್ಟ ರಾಜರುಗಳು ಸ್ವತಂತ್ರವಾಗಿ ತಮ್ಮ ತಮ್ಮೊಳಗೆ ಕಲಹ ಮಾಡುತ್ತ ಒಬ್ಬರ ಸೀಮೆಯನ್ನು ಮತ್ತೊಬ್ಬರು ಆಕ್ರಮಿಸುತ್ತಿದ್ದರು.

ಸಾಳುವ ನಾಲ್ವಡಿ ಗುಂಡ ಮತ್ತು ಅವನ ರಾಣಿ ಮಲ್ಲಮಾಂಬಿಕೆಗೆ ಅಹೋಬಲ ನರಸಿಂಹನ ವರ ಪ್ರಸಾದದಿಂದ ಜನಿಸಿದವನೇ ಸಾಳುವ ನರಸಿಂಗರಾಯ. ೧೪೫೬ ರಲ್ಲಿ ಗುಂಡ ಭೂವರನು ತನ್ನ ಮಗನಿಗೆ ಚಂದ್ರಗಿರಿಯ ಪಟ್ಟವನ್ನು ಕಟ್ಟಿ ತಾನು ತಪಸ್ಸಿಗೆ ಹೊರಟುಹೋದನು. ಚಿಕ್ಕರಾಜ್ಯದ ರಾಜನಾದ ನರಸಿಂಗನು ತನ್ನ ಬಾಹುಬಲದಿಂದಲೂ ನೆಚ್ಚಿನ ಮಂತ್ರಿ ಮತ್ತು ದಳವಾಯಿಗಳ ಸಹಾಯದಿಂದಲೂ ೧೪೫೯ ರೊಳಗೆ ಮುಳಬಾಗಿಲು, ಕರ್ನೂಲು, ಉದಯಗಿರಿ ಮೊದಲಾದ ಭಾಗಗಳನ್ನೊಳಗೊಂಡ ಪೆನುಗೊಂಡೆಯ ರಾಜ್ಯಕ್ಕೆ ಮಹಾ ಮಂಡಲೇಶ್ವರನಾದನು. ಮಲ್ಲಿಕಾರ್ಜುನನು ತನ್ನ ಮಂತ್ರಿಯೊಡನೆ ೧೪೫೯ ರಲ್ಲಿ ಪೆನುಗೊಂಡೆಗೆ ಹೋಗಬೇಕಾಯಿತು. ೧೪೬೫ ರಲ್ಲಿ ನಡೆದ ರಾಜ್ಯ ಕ್ರಾಂತಿಯ ಫಲವಾಗಿ ಉಂಟಾದ ಈರ್ವರು ಚಕ್ರವರ್ತಿಗಳ ಅನೈಕಮತ್ಯದ ಬಿಗಿಯಿಲ್ಲದ ಆಡಳಿತಕಾಲದಲ್ಲಿ ಸಾಳುವ ನರಸಿಂಗರಾಯನು ಹೆಸರಿಗೆ ಮಾತ್ರ ವಿರೂಪಾಕ್ಷನನ್ನು ಚಕ್ರಾಧಿಪತಿಯೆಂದು ಒಪ್ಪಿಕೊಂಡು ತಾನು ಮಹಾ ಅರಸ, ಮಹಾ ರಾಜ, ಮಹಾ ಮಂಡಲೇಶ್ವರ, ಒಡೆಯ ನಾಯಕ ಮುಂತಾದ ಬಿರುದುಗಳನ್ನು ಹೊಂದಿ

ಆಳಲಾರಂಭಿಸಿದನು. ವಿಜಯನಗರದ ಸಾಮಂತ ರಾಜರೆಲ್ಲಾ ಸಾಳುವ ನರಸಿಂಗ ರಾಯನೇ ತಮ್ಮ ರಾಜಾಧಿರಾಜನೆಂದು ಬಗೆದು ಅವನ ಕಡೆಗೆ ದೃಷ್ಟಿಯನ್ನು ಹೊರಳಿಸಿದರು. ೧೪೮೬ರ ಸುಮಾರಿನಲ್ಲಿ ನಡೆದ ಮತ್ತೊಂದು ರಾಜ್ಯ ಕ್ರಾಂತಿಯ ಫಲವಾಗಿ ನರಸಿಂಗರಾಯನು ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢ ಪ್ರತಾಪ ನರಸಿಂಗರಾಯ ಎಂಬ ಬಿರುದಾಂತು ವಿದ್ಯಾನಗರದ ವಜ್ರಸಿಂಹಾಸನಾಧೀನಾಗಿ ಪೃಥ್ವಿಯನ್ನಾಳಲಾರಂಭಿಸಿದನು. ೧೭ ವರ್ಷಗಳಕಾಲ ಧರ್ಮದಿಂದಲೂ ಯಶಸ್ಸಿನಿಂದಲೂ ರಾಜ್ಯಭಾರ ಮಾಡಿದನು.

ಮಹಾ ಪ್ರಧಾನ ಅನ್ನಮರಸಯ್ಯ, ದಳವಾಯಿ ಈಶ್ವರ, ಇವನ ಮಕ್ಕಳು ನರಸಣ್ಣನಾಯಕ ಮತ್ತು ವೀರನರಸಿಂಹ, ಆರವೇಟಿ ಬುಕ್ಕ, ಮತ್ತು ಚಟ್ಟಿಗಂಗಣ್ಣ ಮುಂತಾದವರು ನರಸಿಂಗರಾಯನ ಅಭ್ಯುದಯಕ್ಕೆ ಕಾರಣರಾದವರು. ೧೪೯೩ನೆಯ ಸಂವತ್ಸರದಲ್ಲಿ ಮಡಿದ ದಳವಾಯಿ ಈಶ್ವರನು ನರಸಿಂಗರಾಯನ ಮುಖ್ಯ ದಳಪತಿಯಾಗಿದ್ದು ಅವನಿಗೆ ಅನೇಕ ಕೋಟೆಗಳನ್ನು ಜಯಿಸಿ ಕೊಟ್ಟನೆಂದು 'ವರಾಹ ಪುರಾಣ' ಎಂಬ ತೆಲುಗು ಗ್ರಂಥದಲ್ಲಿ ಹೇಳಿದೆ. ಕೋಟೆಗಳಲ್ಲಿ ಬಾಗೂರು ಕೋಟೆಯ ಹೆಸರು ಉಕ್ತವಾಗಿದೆ. ಈ ವಿಷಯಗಳನ್ನು ಪರಿಶೀಲಿಸುವುದರಿಂದ ಮೊದಲನೆಯ ಕ್ರಾಂತಿಯಾದ ಮೇಲೆ ಮತ್ತು ಮುಖ್ಯದಳವಾಯಿ ಈಶ್ವರನ ಮರಣಕ್ಕೆ ಮುಂಚೆ ಅಂದರೆ ೧೪೮೬ ರಿಂದ ೧೪೯೩ ರ ಮಧ್ಯಭಾಗದಲ್ಲಿ ಬಾಗೂರು ಕೋಟೆಯು ಸ್ವಾಧೀನವಾಗಿರಬೇಕು.

"ಸಾಳುವ ನರಸಿಂಹ ರಾಜ್ಯ ಪ್ರತಿಷ್ಠಾಪನಾಚಾರ್ಯ" ಎಂದು ಆರವೀಟಿ ಬುಕ್ಕನನ್ನು ವಿವರಿಸಿದೆ. ಈ ಬೂದಿಹಾಳು ಮುತ್ತಿಗೆಯಲ್ಲಿ ಬುಕ್ಕರಾಯನ ಮಕ್ಕಳಾದ ಸಿಂಗರಾಜ, ರಾಮರಾಜ ಮತ್ತು ರಾಮರಾಜನ ಮಗ ತಿಮ್ಮರಾಜ, ಮೊಮ್ಮಗ ಕೋನೇಟಿರಾಜ ಮತ್ತು ಉದ್ದಗಿರಿ ಕುಮಾರ ಮುಂತಾದವರು ಸೇನಾಸಮೇತರಾಗಿ ಬಂದು ಯುದ್ಧ ಮಾಡಿದಂತೆ ಹೇಳಿದೆ:

ವೃ॥ ಸಹಸ್ರೈಸ್ಸಪ್ತತ್ಯಾ ಸಹಿತಮಪಿಯುಸ್ಸಿಂಧುಜನುಷಾಂ
ಸಪಾದಸ್ಯಾನೀತುಂ ಸಮಿತಿ ಭುಜಶೌರ್ಯೇಣ ಮಹತಾ।
ವಿಜಿತ್ಯಾದತ್ತ ಕ್ಷ್ಮಾವವನಿಗಿರಿದುರ್ಗಂ ವಿಭುತಯಾ
ವಿಧೂ ಕೇಂದ್ರಃ ಕಾಸಪ್ಪೊಡೆಯ ಮಪಿವಿದ್ರಾವ್ಯ ಸಹಸಾ॥

ಎಪ್ಪತ್ತು ಸಾವಿರ ಕುದುರೆ ಮತ್ತು ಕಾಲುಬಲದ ಸಹಾಯದಿಂದ ಕಾಸಪ್ಪೊಡೆಯ (ಬಾಲ ಭಾಗವತಮು ಎಂಬ ಗ್ರಂಥದಲ್ಲಿ ಕಾಚ ಎಂದು ಹೇಳಿದೆ)ನು ರಕ್ಷಿಸುತ್ತಿದ್ದ ವಿಭೂತಿ ಎಂಬ ಅವನಿಗಿರಿ ದುರ್ಗವನ್ನು ರಾಮರಾಜನು ತನ್ನ ಭುಜಬಲದಿಂದ

ಸೋಲಿಸಿ ಕೋಟೆಯನ್ನು ಪುಡಿಪುಡಿ ಮಾಡಿದನು ಎಂದು ಉಕ್ತವಾಗಿದೆ. ಕಾಸ ಪ್ಪೊಡೆಯನಿಗೆ ಬಾಲಭಾಗವತದಲ್ಲಿ ಕಾಚ ಎಂದು ಹೇಳಿದೆ. ಈ ಸಿರುಮನ ಚರಿತ್ರೆ ಯಲ್ಲಿ ಕಾಚ, ಕಾಚೇಂದ್ರ, ಕಾಚನಾಯಕ ಮುಂತಾಗಿ ವಿವರಿಸಿದೆ. ಬುಕ್ಕರಾಯನ ಮಕ್ಕಳು ಈ ರೀತಿ ನರಸಿಂಗರಾಯನಿಗೆ ಸಹಾಯ ಮಾಡಿರುವುದರಿಂದಲೇ 'ಸಾಳುವ ನರಸಿಂಹ ರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಧರಿಸಿರಬಹುದೆಂದು ವ್ಯಕ್ತವಾಗುವುದು.

ಈ ಸಿರುಮನ ಚರಿತೆಯು ವಿಜಯನಗರದ ಚರಿತೆಯನ್ನು ವಿವರಿಸಲು ಸಹಾಯ ವಾದ ಚಾರಿತ್ರಕ ಗ್ರಂಥವಾಗಿರುವುದು.

ಸಾಳುವ ನರಸಿಂಗರಾಯನ ಸೇನಾಪತಿಯಾದ ಈಶ್ವರನು ಅನೇಕ ಕೋಟೆ ಗಳನ್ನು ಗೆದ್ದನೆಂದೂ ಅವುಗಳಲ್ಲಿ ಬೆಲಗೂರು, ಬಾಗೂರು ಮತ್ತು ಬೂದಿಹಾಳು (ಬೇದಂಡಕೋಟೆ ಎಂದಿದೆ) ಕೋಟೆಗಳು ಮುಖ್ಯವೆಂದೂ ನಂದಿಮಲ್ಲಯ್ಯ ಘಂಟಾ ಸಿಂಗಯ್ಯ ಎಂಬ ಆಂಧ್ರ ಕವಿಗಳು ರಚಿಸಿರುವ ವರಾಹಾಪುರಾಣ ಎಂಬ ಗ್ರಂಥದಲ್ಲಿ ರುವ ಈ ಪದ್ಯಗಳಿಂದ ತಿಳಿದು ಬರುವುದು:-----

ಉದಯಾದಿ ಬೇಧಿಂಚ ಹುತ್ತರಿ ನಿರ್ಜಿಂಚಿ।
ಗಂಡಿಕೋಟಪುರಂಬುಂ ಗಡಲಂಡ್ರವ್ವೆ
ಪೆನುಕೊಂಡ ಸಾಧಿಂಚಿ ಬೆಲಗೂರು ಹಾರಿಂಚಿಂ
ಗೋವೆಲ ನೆಲ್ಲೂರು ಗುಂಟು ಪರಿಚಿ ॥ ೧ ॥

ಕುಂದಾಣಿ ವಿಪಳಿಂಚಿ ಗೋಡಗು ಚಿಂತ ಜಯಿಂಚಿ।
ಬಾಗೂರು ಪಂದನು ಪಾಡು ಚೇಸಿ।
ನರುಗೊಂಡ ವೇತಲಿಂಚಿ ನಾವುರು ಮರ್ದಿಂಚಿ।
ಸಿರಂಗಪಟ್ನಂಬು ಬಾರಿಸವರ ॥ ೨ ॥

ರಾಯಬೇಹೂತ್ತ ಮಲ್ಲಧರಾವರಾವ।
ಮೋಹನಮುರಾರಿ ಬರ್ಬರ ಬಾಹುಸಾಳ್ವ।
ನಾರಸಿಂಹ ಪ್ರತಾಪ ಸನ್ನಾಹನುಂಡಗುಚು।
ವಿಶ್ವಹಿತಕಾರಿ ತಿಮ್ಮಯ್ಯ ಈಶ್ವರುಂಡು ॥ ೩ ॥

ನರಸಿಂಗಕ್ಷಿತಿ ಪಾಲು ಪಂಪುನುಡುಗೋಣಂಜೇಸಿ ದಂಡೆತ್ತಿಯೀ।
ಶ್ವರ ಭೂಭರ್ತ ಬೇಡಂಬ ಕೋಟೆಯವನಾಶ್ವ ವ್ರತಮುರ್ಖ ಭಿಮುಸಂ।
ಗಂಬುನಂ ಗೊಲ್ಲನಟ್ಟುಕೋನಿವಿಂ ಕಂಗಂಡು ಕೂವಿಪುರಾಂ।
ತರಸೀಮಂಬುನಂ ಜಕರಗೋನರಕಿ ದುರ್ದಾಂತಾರಿ ಸಂತಾನ ಮುರ್ಖ ॥ ೪ ॥

ವಂದನೆಗಳು: ಸಾಂಗತ್ಯವನ್ನು ಅದರ ಒಡೆಯರಿಂದ ನನಗೆ ಸಂಪಾದಿಸಿ ಕೊಟ್ಟಿರುವ ಉಪಕಾರ ನನ್ನ ಮಿತ್ರರಾದ ಶೇಕದಾರರಾದ ಶ್ರೀ ಜಿ. ಎಂ. ಬಸವರಾಜಯ್ಯನವರದು. ಇವರಿಗೂ ಗ್ರಂಥಮಾಲೀಕರಿಗೂ ನಾನು ಚಿರಋಣಿ. ಈ ಪುಟ್ಟ ಗ್ರಂಥವನ್ನು ಶರಣ ಸಾಹಿತ್ಯದಲ್ಲಿ ಪ್ರಕಟಿಸಿ, ಅನಂತರ ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿಯೂ ಪ್ರಕಟಿಸಿದ ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ ಬಿರುದಾಂಕಿತರಾದ ಶ್ರೀ ಶಿವಮೂರ್ತಿಶಾಸ್ತ್ರಿಗಳವರಿಗೂ, ಮುದ್ರಣದ ಪ್ರತಿಗಳನ್ನು ಓದಿ ಸರಿಪಡಿಸಿದುದಲ್ಲದೆ, ಅಂದವಾಗಿ ಇದನ್ನು ಪ್ರಕಟಿಸಲು ಸೂಕ್ತಸಲಹೆಗಳನ್ನಿತ್ತ ಶ್ರೀ ಹೆಚ್. ಎಸ್. ರೇಣುಕಪ್ರಸಾದ ಬಿ.ಎ., ರವರಿಗೂ ನನ್ನ ಅನೇಕ ವಂದನೆಗಳು.

ಚಿತ್ರದುರ್ಗ<br>
ಖರ ಸಂ. ಜ್ಯೇಷ್ಠ ಶು. ೬ ಸೋಮವಾರ<br>
(ತಾ|| ೧೧-೬-೧೯೫೧.)

ಹುಲ್ಲೂರು ಶ್ರೀನಿವಾಸ ಜೋಯಿಸ

# ಪ ರಿ ವಿ ಡಿ

# ಕನ್ನಡಕಲಿ ಸಿರುಮನ ಚರಿತೆ

## ೧

### ಬೂದಿಪುರ ಪಟ್ಟಣವನ್ನು ಏನೆಂದು ಬಣ್ಣಿಸಲಿ !

ಸಾಂ॥ ಇದು ರಾವಣನಿಪ ಲಂಕೆಯೋ ಭಾವಿಸೆ।
ಇದು ರಾಮನಿಹ ಕುಮ್ಮಟವೋ ॥ *
ಇದು ವೈರಿ ನೃಪರೆದೆದಲ್ಲಣ ವೆನಿಸುವು।
ದಿದಕೆ ಸಾಟಿಯೆ? ಮಿಕ್ಕ ನಗರ॥

ಮೂಡಣ ಬಾಗಿಲಿನಲ್ಲಿ ಕಪ್ಪರ ವೀರಣ್ಣ; ಪಡುವಣ ಬಾಗಿಲಲ್ಲಿ ಸತ್ಯ ಸ್ವರೂಪಿ ಏಕಾನಾಥಿ; ಎರಡನೇ ಬಾಗಿಲ ಬಳಿ ಕೊಳಲಗೋಪಾಲ ಇವರ ದೇವ ಮಂದಿರ ಗಳು ಶೋಭಿಸುವುವು. ತಾಯಿ ಬನಶಂಕರಿ, ಸೋಮೇಶ, ವೀರೇಶ ಇವರ ದೇವಾ ಲಯಗಳಿಂದ ಬೂದಿಪುರವು ದೇಶಕ್ಕೆ ಹೊಸ ಬಗೆಯ ಪಟ್ಟಣವಾಗಿ ಶೋಭಿಸುವುದು. ಸೋಮ ಸೂರ್ಯ ಬೀದಿಗಳಿಂದಲೂ, ಕೋವಿದರು ವರ್ತಕರುಗಳ ಅಂಗಡಿಗಳೂ ಗಂಧಿಗರ ಅಂಗಡಿಗಳೂ ಇವುಗಳ ಮುಂಭಾಗದಲ್ಲಿ ಚಿಪ್ಪಿಗರ ಚಿತ್ರಕೆಲಸಗಳಿಂದಲೂ ಈ ನಗರವು ರಂಜಿಸುವುದು. ವಡೆ. ಸುಕ್ಕೇನುಂಡೆ, ಚಕ್ಕುಲಿ, ಕರಜಿಕಾಯಿ, ಕಡುಬು, ಯಣ್ಣೊರಿಗೆ ಮಾಡುವ ಬ್ರಾಹ್ಮಣರ ಕೇರಿಯಲ್ಲಿ ಅಲ್ಲಲ್ಲಿ ಸೊಡರು ತುಂಬಿರುವುದು. ಒಂದು ಕಡೆ ವಿಟರನ್ನು ಮೋಹಗೊಳಿಸುವ ಸೂಳೆಯರಿರುವ ಕೇರಿಯೂ, ಮತ್ತೊಂದೆಡೆ ಚದುರಂಗ ಜೂಜು ಆಡುವ ಮನ್ನೆಯರ ಆಲಯಗಳೂ ಟಗರು. ಕೋಳಿಗಳ ಕಾಳಗ ಮಂದಿರಗಳೂ ನೋಟಕರ ಮನವನ್ನಾಕರ್ಷಿಸುತ್ತಿದ್ದುವು. ಹರಿಗೆ ಪಾಲ್ಗಡಲೂ, ಸುರಪತಿಗೆ ಅಮರಾವತಿಯೂ ದೊರಕಿದಂತೆ ಸಿರುಮ ನೃಪಾಲನಿಗೆ ಬೂದಿಹಾಳ ಪಟ್ಟಣವು ಅಧಿಷ್ಠಾನವಾಗಿತ್ತು.

ಸಿರುಮಭೂಪಾಲನ ಪಟ್ಟದರಸಿ ಚಿಕ್ಕಮ್ಮ. ಅಂಗನೆ ಸಹಿತ ಸಿರುಮನು ಮಂಗಳ ಮಹಿಮನೆನಿಸುವ ಸೋಮೇಶ್ವರ ಲಿಂಗವನ್ನು ಒಲುಮೆಯಿಂದ ಪೂಜಿಸು ತ್ತಿದ್ದನು. ಆ ಸೋಮೇಶನ ವರದಿಂದ ಪರಬಲ ಮಾರ್ತಾಂಡನಾದ ಕಾಚನಾಯಕ, ಚಲದಂಕ ಮಲ್ಲ ಕುಮಾರ ಮಲ್ಲಯ್ಯ, ವೀರಭದ್ರ, ಸೋಮಣ್ಣ ಮತ್ತು ನಂಬಿಯಣ್ಣ ಎಂಬ ವೀರರಾಧ ಐವರು ಪುತ್ರರಾದರು. ರೂಪವತಿಯರಾದ ಕುವ ರಿಯರನ್ನು ವಿವಾಹವಾಗಿ ಅಳಿಯ ಬಸವಯ್ಯ, ಅಳಿಯ ತಿಪ್ಪಯ್ಯ ಮತ್ತು

* ಕುಮಾರ ರಾಮನಾಥನ ರಾಜಧಾನಿಯಾಗಿದ್ದ ಕುಮ್ಮಟನಗರದ ಕೋಟೆಯು ಅಂದಿನ ಕೋಟೆಗಳಲ್ಲೆಲ್ಲಾ ಅಭೇದ್ಯವಾಗಿತ್ತು.

ಅಳಿಯ ಭೈರಯ್ಯ ಎಂಬುವರು ವಿಕ್ರಮದೇಳಿಗೆಯಿಂದ ತೊಳಗುತ್ತಿದ್ದರು. ಸಿರುಮನ ತಮ್ಮ ಮಲ್ಲನಾಯಕನು ಧರ್ಮಪರನೂ ನೀತಿವಂತನೂ ಆಗಿ ಹೆಗ್ಗೆರೆಯಲ್ಲಿ ಪ್ರಭುವಾಗಿದ್ದನು.- ವೀರಾಧಿ ವೀರರು ಸಿರುಮನ ಸೇನೆಯನ್ನಲಂಕರಿಸಿದ್ದರು. ನಾನಾ ದೇಶಗಳಿಂದ ಸುಭಟರೂ ಬಲ್ಲಿದರೂ ವೀರರೂ ಮುಂತಾದವರನ್ನು ಕರೆಸಿ ಬೆಳ್ಳಿ, ಭಂಗಾರ, ಹೊನ್ನುಗಳನ್ನಿತ್ತು ತನ್ನ ಸೇನೆಯನ್ನು ಅಭಿವೃದ್ಧಿಗೊಳಿಸುತ್ತಿದ್ದನು. ಸಿರುಮನು ವೈಭವಗಳಿಂದ ಮೆರೆಯುತ್ತಾ, ಸಂತೋಷದಿಂದ ಪ್ರಜೆಗಳನ್ನು ಪಾಲಿಸುತ್ತಾ ಸುಖದಿಂದಿರುತ್ತಿದ್ದನು. ಸಿರಿಯಿಂದ, ಬಲುಹಿಂದ, ಚಲದಿಂದ ಆಳುತ್ತಿದ್ದ ರಾಜನನ್ನು ಪ್ರಜೆಗಳು ಸಂತೋಷದಿಂದ ಓಲೈಸುತ್ತಿದ್ದರು. ದಂಡ, ಕೊಂಡೆಯ, ಸೆರೆ, ಸಂಕೋಲೆ, ಅಳಿವು, ಅನ್ಯಾಯಗಳಿಗೆ ಒಳಗಾಗದಿದ್ದ ಮಂತ್ರಿ ಕಲ್ಲರಸನ ಸಲಹೆಯಂತೆ ಸಿರುಮನು ರಾಜ್ಯವಾಳುತ್ತಿದ್ದನು. ಶೃಂಗಾರವಾದ ಕರುಮಾಡದ ಅರಮನೆಯ ಮುಂದೆ ಹಿರಿಯ ಚಾವಡಿಯೂ, ಮಲ್ಲ ಗರುಡಿಗಳೂ, ಕುದುರೆಲಾಯವೂ ಒಪ್ಪುತ್ತಿದ್ದವು. ಬೆಲಗೂರು ಭೈರನಾಯಕನ ಕುವರಿಯನ್ನು ಕಾಜೇಂದ್ರನಿಗೂ, ಅಳಿಯ ತಿಪ್ಪಯ್ಯನ ಕುವರಿಯನ್ನು ಕುಮಾರ ಮಲ್ಲಯ್ಯನಿಗೂ, ಆಲಕುರಿಕೆಯ ರುದ್ರಯ್ಯನ ಮಗಳನ್ನು ವೀರಭದ್ರನಿಗೂ ತಂದು ವೈಭವದಿಂದ ವಿವಾಹ ಮಾಡಿದನು.

ಮೃಗಗಳು ಹೆಚ್ಚಿ ಬೆಳೆಗಳನ್ನು ನಾಶಮಾಡುತ್ತಿವೆ. ಬೇಟೆಗೆ ಬರಬೇಕೆಂದು ಒಬ್ಬ ಚರನು ಬಂದು ಹೇಳಲು ಸಿರುಮೇಂದ್ರನು ಆಳು ಕುದುರೆ ಬಲ ಸಹಿತ ಬೇಟೆಗೆ ಹೊರಟನು. ನಾನಾ ವಿಧವಾದ ಬಲೆಗಳು, ಕಲ್ಲಿಗಳು, ಬಡಿಕೋಲು, ಈಟಿ ಮುಂತಾದವುಗಳನ್ನು ಹಿಡಿದು ಬೇಡರ ತಂಡವು ಹೊರಟಿತು. ಹುಲಿಗೆ ಮುರಿ, ಸಾರಂಗ ಮರ್ದನ, ಬಲುಹಂದಿ ಗೋದಣ ಎಂಬ ಬಿರುದಿನ ಬೇಟೆನಾಯಿಗಳು ಇವರೊಡನೆ ಸಾರಿ ಬಂದವು. ಹುಲಿಯ ಬಂಡಿ, ಸಲಹಿದ ಎರಳೆ, ಹಲವು ಬಗೆಯ ಪಕ್ಷಿಗಳು, ಗಿಡುಗ, ಸಾಳುವಗಳನ್ನು ಹಿಡಿದುಕೊಂಡು ಕಲಿವೀರರು ನಡೆದರು.

ಮೂಡಣ ದಿಕ್ಕಿಗೆ ಹೊರಟು ಒಂದು ಗಾವುದ ಪ್ರಯಾಣ ಮಾಡಲು ಹರಿಯಜ ಸುರ ರಕ್ಷಕನಾದ ಪುರಹರ ದಶರಥ ರಾಮೇಶ್ವರನಿರುವ ಗಿರಿಯ ತಪ್ಪಲನ್ನು ಸೇರಿದರು. ಆ ಕಾನನದಲ್ಲಿರುವ ನಾನಾ ವಿಧದ ವೃಕ್ಷಗಳ ಮಧ್ಯದಲ್ಲಿ ಋಷಿ,ಸಿದ್ಧರ ಗುಂಪುಗಳು, ಮಳೆ,ಬಿಸಿಲು,ಗಾಳಿಗಳ ಬಾಧೆಯಿಲ್ಲದೆ ವಾಸವಾಗಿದ್ದುವು. ಲಕ್ಕಿ, ಅಂಕೋಲೆ,ಬಿದಿರು, ದೇವದಾರು, ಕಕ್ಕೆ, ತುಂಬುರ, ಅರುಟಾಳು, ಬಿಕ್ಕೆ, ಬೇಲ, ನೇರಿಳೆ, ಮಾಮರಗಳಿಂದ ಆ ವಿಪಿನವು ಕಿಕ್ಕಿರಿದಿರುವುದು. ಗಿಡ ಬಳ್ಳಿ ಮೆಳೆಗಳು, ಎಸೆಯುವ ಝರಿಗಳು, ಹೆಮ್ಮಡುಗಳು, ಹಳ್ಳ ಕೊಳ್ಳಗಳೊಳಗೆ ಹೊಕ್ಕು ಬೊಬ್ಬೆ ಇಡಲು ಮೃಗಗಳು ಹೆದರಿ ಓಡಿದವು. ಹುಲ್ಲೆ, ಹರಿಣ, ಕಾಡೆಮ್ಮೆ, ಕಡವು, ಸಾರಂಗ, ಕೊಬ್ಬಿದ ಹುಲಿ, ಮೊಲ, ಉಡ, ಕಾಡು ಹಕ್ಕಿಗಳನ್ನು ಕೊಂದು ಕೆಡವಿದರು.

ಓಡುವ ವೃಗಗಳನ್ನು ಕಂಡು ಬೊಬ್ಬಿರಿದು ಬಾಣಗಳನ್ನೆಸೆಯಲು, ಬಾಣದ ಹತಿಯಿಂದ ಕೆಲವು ವೃಗಗಳು ಅಸುವನ್ನು ತೊರೆದು ಮಲಗಿದವು. ಬಲೆಯಿಂದ, ಬಡಿಕೋಲುಗಳಿಂದ, ಸರಳಿನಿಂದ, ನಾಯಿಗಳಿಂದ ವೃಗಗಳನ್ನು ಕೊಲ್ಲುತ್ತ ಬೇಡಪಡೆಯು ಮುಂದಕ್ಕೆ ನಡೆಯಿತು. ತಂಪಾದ ನೆಳಲಿಂದಲೂ,ಹೂವಿನ ಗಿಡಗಳಿಂದಲೂ, ಫಲ ನಿಬಿಡವಾದ ವೃಕ್ಷಗಳಿಂದಲೂ ತುಂಬಿರುವ ಆ ಅರಣ್ಯ ಮಧ್ಯದಲ್ಲಿ ಕಳಸ ಗೋಪುರಗಳ ರಾಮೇಶನಾಲಯವು ಸಿರುಮನಿಗೆ ಕಾಣಿಸಿತು. ಆ ದೇವಾಲಯವನ್ನು ಹೊಕ್ಕು

ಸಾಂ ॥ ಜಯ ಜಯ ಸುರಗಣ ಪೂಜಿತ ಸುರವಂದ್ಯ ।
ಜಯ ಜಯ ಜಗದೀಶ್ವರನೇ ॥
ಜಯ ಜಯ ಮೃತ್ಯುಂಜಯ ತ್ರಿಪುರ ಹರ ।
ಜಯ ಎಂದು ಎರಗಿದ ಸಿರುಮಾ ॥

ಕಾಮಹರನೆ ಕರುಣಾಕರ ನಿರ್ಮಲ ।
ವ್ಯೋಮಕೇಶನೇ ಭೀಮ ವರದ ॥
ಸ್ವಾಮಿ ತ್ರೈಜಗವಂದಿತ ಜಯ ದಶರಥ ।
ರಾಮೇಶ ಪಾಲಿಪುದೆನ್ನಾ ॥

ಎಂದು ಪುಷ್ಪಗಳನ್ನರ್ಪಿಸಿ ಭಕ್ತಿಯಿಂದ ಪೂಜಿಸಿ ಪ್ರಸಾದವನ್ನು ಸ್ವೀಕರಿಸಿದನು. ಮುಂದೆ ಬೇಟೆಯಾಡಲು ಹೊರಟನು.

ಈ ಅರಣ್ಯವು ಹಿರಿಯೂರು ಕಸವೇಂದ್ರ ಭೂಪಾಲನಿಗೆ ಸೇರಿತ್ತು. ಆ ರಾಜನು ತನ್ನ ಅಪ್ಪಣೆಯಿಲ್ಲದೆ ಸಿರುಮೇಂದ್ರನು ಅಳುಕದೆ ತನ್ನ ಸೀಮೆಯನ್ನು ಹೊಗಬಹುದೇ ಎಂದು ಸಿಟ್ಟುಗೊಂಡು “ ಈ ನಮ್ಮ ಸೀಮೆಯಲ್ಲಿ ಬೇಟೆಯಾಡಬೇಡ. ನಿಮ್ಮ ಸೀಮೆಗೆ ತೆರಳು” ಎಂದು ಊಳಿಗದವನ ಸಂಗಡ ಹೇಳಿ ಕಳುಹಿಸಿದನು. ಸಿರುಮನು ಈ ಹಮ್ಮಿನ ಮಾತಿಗೆ ಕಿವಿಗೊಡದೆ ಊಳಿಗದವನನ್ನು ನೂಕಿಸಿ ಬೇಟೆಯಿಂದ ಹೊತ್ತು-ಕಳೆದು, ಹುಲ್ಲೆ, ಕರಡಿ, ಕಾಡು-ಬೆಕ್ಕು, ಹೆರಳೆ, ಕಡವೆ, ಕಾಡೆಮ್ಮೆ ಸೀಳ್ನಾಯಿ, ಮೊಲ, ಮುಂಗುಲಿ ಮುಂತಾದ ವೃಗಗಳನ್ನೂ, ಹಂಗ, ಗೂಬೆ ಚಂಬೋತ, ಲಾವುಗೆ, ನವಿಲು ಮುಂತಾದ ಪಕ್ಷಿ ಸಂಕುಲವನ್ನೂ ಬೇಟೆಯಾಡಿ ಹೊರೆಗಳನ್ನು ಹೊರಿಸಿಕೊಂಡು ಹಿಂತಿರುಗಿ ಬೂದಿಹಾಳು ಪಟ್ಟಣವನ್ನು ಸೇರಿದನು. ಪುರನಾರಿಯರೂ, ಚಿಕ್ಕಮ್ಮ ಅರಸಿಯೂ ಆರತಿಗಳನ್ನು ಬೆಳಗಿದರು. ಸಿರುಮನು ಅರಮನೆಯನ್ನು ಹೊಕ್ಕು ಅಂತಃಪುರವನ್ನು ಸೇರಿದನು.

೨

ಇತ್ತ ಹಿರಿಯೂರು ಕಸವನಾಯಕನು ಕೋಪಗೊಂಡು ಹತ್ತುಸಾವಿರ ಕಾಲಾಳು ಸಹಿತ ಬೂದಿಹಾಳು ಕೋಟೆಯನ್ನು ಹಿಡಿಯಲು ಹೊರಟನು. ಹಾದಿಯಲ್ಲಿ ಹಳ್ಳಿಗಳನ್ನು ಸೂರೆಮಾಡುತ್ತಾ ಗೋ ಸಮೂಹಗಳನ್ನು ಹಿಡಿಯಲು * ಗೋಪಾಲರು ಓಡಿಬಂದು ಸಿರುಮನಿಗೆ ಸುದ್ದಿಯನ್ನು ಅರುಹಿದರು. ಸಿರುಮನು ಉಗ್ರ ಕೋಪದಿಂದ ಬೆಲಗೂರು ಭೈರವನಾಯಕ, ತಮ್ಮ ಮಲ್ಲಯ್ಯ, ಕುಮಾರರು ಕಾಚ, ಮಲ್ಲ ಮತ್ತು ವೀರಭದ್ರ, ನಿಡುಗಟ್ಟದ ನಾಗರಾಜ, ಹೆಗ್ಗೆರೆ ಚನ್ನನಾಯಕ ಮುಂತಾದವರೊಡನೆ ಹೊಕ್ಕಳ ಘಂಟೆ, ಮುಕ್ಕಣ್ಣಬಲ್ಲೆಯುಗಳ ಬಿರುದಿನ ಎಕ್ಕಟಿಗರು ಸಹವಾಗಿ ವೈರಿಯ ಮೇಲೇರಿ ಹೋದನು. ಉಭಯ ಪಕ್ಷದವರೂ ಸಂಧಿಸಿ ಬೊಬ್ಬಿರಿದು ಹೋರಾಡಿದರು. ಒಂದು ಪಕ್ಕದಲ್ಲಿ ಬೆಲಗೂರು ಭೈರವನೂ ಮತ್ತೊಂದು ಪಕ್ಕದಲ್ಲಿ ಹೆಸರಾದ ರಾವುತರೂ, ಇನ್ನೊಂದು ಪಕ್ಕದಲ್ಲಿ ಕುಮಾರಮಲ್ಲಯ್ಯನೂ ಅರಿಬಲವನ್ನು ಮುಂದಗೆಡಿಸಿದರು. ಹಿರಿಯೂರು ಕಸವೇಂದ್ರನ ಮುಂದು ಬಲವು ಮುರಿದೋಡಿತು. ಸಿರುಮನ ಸೈನಿಕರು ನೂರಾರು ಕುದುರೆಗಳನ್ನೂ ಕಾಲಾಳುಗಳನ್ನೂ ಕೋಳುಹಿಡಿದು ಸಿರುಮನಿಗೊಪ್ಪಿಸಿ ದರು. ಸುಭಟರಿಗೆ ಹಿಡಿಹೊನ್ನು ಕಡಗ, ಕಂಠಮಾಲೆ ಮುಂತಾದ ಉಡುಗೊರೆಗಳನ್ನು ಕೊಟ್ಟು ಮನ್ನಿಸಿದನು. ಸಿರುಮನ ಆಜ್ಞೆಯಂತೆ ಲಿಂಗಯ್ಯನು ಕೋಳುಹಿಡಿದು ತಂದ ಕುದುರೆಗಳಿಗೆ ಲಾಯವನ್ನು ಕಟ್ಟಿಸಿ 'ಹಿರಿಯೂರು ಲಾಯ' ಎಂದು ಹೆಸರಿಟ್ಟನು.

ಅತ್ತ ಅವಮಾನಗೊಂಡ ಕಸವನಾಯಕನು ತನ್ನ ಆಪ್ತ ಮಂತ್ರಿಗಳೊಡನೆ ಆಲೋಚಿಸಿ ಗೊಲ್ಲ ಸಿರುಮನ ರಾಜಧಾನಿ ಬೂದಿಹಾಳು ಪಟ್ಟಣವನ್ನು ಮುತ್ತಿ ಕೋಲಾಹಲ ಮಾಡುವುದಾಗಿ ಶಪಥಮಾಡಿದನು. ತನ್ನ ಸರಿ ಸಮಾನರಾದ ರಾಜರು ಗಳಿಗೆ ಕಾಗದಗಳನ್ನು ಬರೆದು ಹಾರನಹಳ್ಳಿ ಕೇಶವರಾಜ. ಹಾಲಕುರಿಕೆಯ ರುದ್ರ ರಾಜಯ್ಯ, ಕಂದೀಕೆರೆ ಚಟ್ಟಗ, ಎಕ್ಕಟಿ ಗಂಗಯ್ಯ ಮು ತಾದವರನ್ನು ಕರೆಸಿ ಕೊಂಡನು. ಅವರೆಲ್ಲಾ ಸೇರಿ ಗುಟ್ಟಾಗಿ ಆಲೋಚನೆ ನಡೆಸಿದರು. ಗೊಲ್ಲ ಸಿರುಮನನ್ನು ಸೋಲಿಸದಿದ್ದರೆ ತಮಗೆ ಅರಸುತನಗಳು ಸ್ಥಿರವಲ್ಲವೆಂದು ತಿಳಿದುಕೊಂಡರು. ಮೂರು ಸಾವಿರ ಕುದುರೆ, ಐವತ್ತು ಸಾವಿರ ಕಾಲು ಪಡೆಯು ಸೇರಿತು. ಎಕ್ಕಟಿ ಗಂಗಯ್ಯನ ಸೇನಾಧಿಪತ್ಯದಲ್ಲಿ ಹೊರಟು ಸಿರುಮನ ರಾಜ್ಯದ ಸಿಗಟಿಗೆರೆ† ಕೋಟೆಯನ್ನು ಮುತ್ತಿ ದರು. ಈ ವರ್ತಮಾನವನ್ನು ಕೇಳಿದೊಡನೆ ಸಿರುಮ ಭೂಪಾಲನು ಅಳಿಯಂದಿರು ಮತ್ತು ಕುಮಾರರ ಸಂಗಡ ತನ್ನ ಸೇನೆಯನ್ನು ಸಿಗಟಿಗೆರೆ ಮುತ್ತಿಗೆಯನ್ನು ಎಬ್ಬಿ

---

* ಪರರಾಜರ ಗೋವುಗಳನ್ನು ಹಿಡಿದರೆ ಅವರಿಗೆ ಯುದ್ಧಕ್ಕೆ ಆಹ್ವಾನವೆಂದು ಪ್ರಾಚೀನ ಕಾಲದ ಸಂಪ್ರದಾಯ.

† ಸಿಂಗಟಗೆರೆ. M. A. R. Ins 4. and also ಕಡೂರು ೮೯. ೨೪. ೧೧೩.

ಸಲು ಕಳುಹಿಸಿದನು. ಕುಮಾರ ಮಲ್ಲಯ್ಯನ ಏಟುಗಳನ್ನು ತಡೆಯಲಾರದೆ ವೈರಿ ದಳವು ಹುಲಿಯನ್ನು ಕಂಡ ಹುಲ್ಲೆಗಳ ತಂಡದಂತೆ ಬೆನ್ನುಕೊಟ್ಟು ಓಡಿತು. ಕೆಲ ವರು ಓಡಲಾರದೆ ಹುತ್ತವನ್ನೇರಿ ಹುಲ್ಲನ್ನು ಕಚ್ಚಿ ನಿಂತರು. ಕೈದುಗಳನ್ನೂ, ಕತ್ತಿ ಗಳನ್ನೂ ಬಿಸುಟು ನಿಂತರು. ವೈರಿಗಳ ಸೊಕ್ಕು ಅಡಗಿತು. ಇದನ್ನು ಕಂಡು ಕುಮಾರ ಮಲ್ಲಯ್ಯನು ಸಂತೋಷದಿಂದ ಧರ್ಮಗಹಳೆಯನ್ನು ಹಿಡಿಸಿದನು. ಮತ್ತೊಂದು ಕಡೆಯಲ್ಲಿ ಶತ್ರುಪಕ್ಷದ ಗೋಸಮೂಹವನ್ನು ಹಿಡಿದು ತಂದು ಬೂದಿ ಪುರದಲ್ಲಿ ಕಟ್ಟಿದರು. ದನ ಕಾಯುವ ಗೊಲ್ಲರು ಎಡದ ಕೈ ಕಟ್ಟಿಕೊಂಡು ತಮ್ಮ ಧಣಿಗಳನ್ನು ಕಂಡು ಈ ಸುದ್ದಿಯನ್ನೆಲ್ಲಾ ಬಿನ್ನೈಸಿದರು. ದೊರೆಗಳೆಲ್ಲಾ ಸೇರಿ ಮತ್ತೊಮ್ಮೆ ಸಿರುಮನನ್ನು ಹಿಡಿಯಲು ಹೊರಟು ಕೃತಕೃತ್ಯರಾಗದೆ ಹಿಂತಿರುಗಿದರು. ಇತ್ತ ಕುಮಾರ ಮಲ್ಲಯ್ಯನು ವೈರಿಗಳ ತಲೆಗಳನ್ನು ತಂದು ಸಿರುಮನ ಮುಂದೆ ಇಡಲು, ರಾಜನು ಮಗನ ಪರಾಕ್ರಮವನ್ನು ಕಂಡು ಹರ್ಷಿಸಿ ಕಂದನನ್ನು ಬಿಗಿದಪ್ಪಿದನು.

ಅಪಜಯ ಹೊಂದಿದ ದೊರೆಗಳೆಲ್ಲಾ ಹಿರಿಯೂರಿನಲ್ಲಿ ಸೇರಿದರು. ಧಿಟ್ಟರಾದ ಗೌಳಿಗರನ್ನು ಬೂದಿಪುರಕ್ಕೆ ಅಟ್ಟಿ ಎತ್ತು ಕುದುರೆಗಳನ್ನು ಬಿಟ್ಟು ಕೊಡುವಂತೆ ಸಿರುಮನಿಗೆ ಹೇಳಿ ಕಳುಹಿಸಿದರು. ಸಿರುಮನು ಅದಕ್ಕೆ ಒಪ್ಪದೆ ದೊರೆಗಳೆಲ್ಲಾ ದಂಡೆತ್ತಿ ಬಂದು ಬೂದಿಪುರವನ್ನು ನೋಡಲಿ! ಶಾಕಿನಿಢಾಕಿನಿಯರು ದಣಿಯು ವಂತೆ ಅವರ ಹೆಣಗಳನ್ನೀಯುವೆನು. ಎಂದಿಗೂ ಎತ್ತು ಕುದುರೆಗಳನ್ನು ಬಿಟ್ಟು ಕೊಡುವುದಿಲ್ಲ ಎಂದು ಪೌರುಷದ ಮಾತುಗಳನ್ನು ಗೌಳಿಗರೊಡನೆ ಹೇಳಿ ಕಳಿಸಿದನು. ದೊರೆಗಳೆಲ್ಲಾ ಆಲೋಚನೆ ಮಾಡಿ ಸಾಳುವ ನರಸಿಂಗರಾಯನನ್ನು ಕರತಂದು ಬೂದಿಪುರವನ್ನು ಹಾಳು ಮಾಡುವುದಾಗಿ ನಿರ್ಧರಿಸಿದರು. ಅಂದು ತಮ್ಮ ತಮ್ಮ ಪಟ್ಟಣವನ್ನು ದುಗುಡದಿಂದ ಸೇರಿದರು. ಈ ವರ್ತಮಾನವನ್ನು ಸಿರುಮನ ಕಡೆಯ ಬೇಹು ಭಟರು ಅಂದು ರಾತ್ರಿಯೇ ಸಿರುಮನಿಗೆ ತಿಳಿಸಿದರು. ನಸುನಗುತ್ತಾ, ಬಂದು ದನ್ನು ನೋಡಿಕೊಳ್ಳುತ್ತೇನೆ ಎನ್ನುತ್ತಾ ಮನ್ನೆಯರನ್ನು ಮನ್ನಿಸಿ ಕಳುಹಿಸಿ ತಾನು ಅರಮನೆಯನ್ನು ಸೇರಿದನು.

೩

ವೇದರಾಜ, ಕೇಶವರಾಜ, ರುದ್ರರಾಜ, ಕುರುವಂಕದ ಜಕ್ಕನಾಯಕ, ಮಾಳಯ್ಯ ಮುಂತಾದವರು, ಹಿರಿಯೂರು ಕಸವಭೂಪಾಲನ ಅರಮನೆಯಲ್ಲಿ ಸೇರಿ ಆಲೋಚಿಸಿದರು. ಎಕ್ಕಟಿ ಗಂಗನಾಯಕನನ್ನೂ ಕರೆಸಿದರು. ಕಸವನಾ ನಾಯಕ ಮತ್ತು ಎಕ್ಕಟಿ ಗಂಗನಾಯಕ ಈ ಈರ್ವರು ಚಂದ್ರಗಿರಿಗೆ ಹೋಗಿ ಎಲ್ಲಾ ಸಂಗತಿಗಳನ್ನೂ ಸಾಳುವ ನರಸಿಂಗರಾಯನಿಗೆ ಬಿನ್ನೈಸಿ ಸಕಲ ಸೇನೆಯೊಡನೆ ಅವ ನನ್ನು ಕರತರಬೇಕೆಂದು ನಿರ್ಧರಿಸಿದರು. ಅದರಂತೆ ಅವರೀರ್ವರೂ ಅಪರೂಪವಾದ ವಸ್ತುಗಳನ್ನು ಉಲುಪೆಯಾಗಿ ತೆಗೆದುಕೊಂಡು ಪಯಣದಮೇಲೆ ಪಯಣಮಾಡಿ ಚಂದ್ರಗಿರಿಯನ್ನು ಸೇರಿದರು.

ಅರಿರಾಯ ಗಿರಿವಜ್ರ ದಂಡಮಂಡಿತರಾಯ ಹರಿಣ ಶಾರ್ದೂಲ ಎಂಬ ಬಿರು ದಾಂತ ನರಸಿಂಗರಾಯನು ಅರಸು ಮಕ್ಕಳು ಸಹಿತವಾಗಿ ಸಿಂಹಪೀಠದಲ್ಲಿ ಮಂಡಿಸಿ ದ್ದನು. ಮನ್ನೆಯರು, ಸಾಮಂತರು, ಸಚಿವರು ಚಂಡವಿಕ್ರಮರಾದ ದಂಡಾಧಿಪತಿ ಗಳು, ರಾಜಪುತ್ರರು ಇವರ ಸಮೂಹದಿಂದ ಸಭೆಯು ಶೋಭಾಯಮಾನವಾಗಿತ್ತು. ವಾದಿ ವಾಗ್ಮಿಗಳು, ಭಾವುಕರು, ಸವಿಯನ್ನಾಲೈಸುವ ರಸಿಕರು, ಕೋವಿದರು ಕುಳಿತಿದ್ದರು. ನಟುವರು, ಸಂಗೀತಗಾರರು, ಸೇನಭೋವರು, ಭಟ್ಟರು ಮುಂತಾ ದವರು ಮತ್ತೊಂದೆಡೆಯಲ್ಲಿ ಕುಳಿತಿದ್ದರು- ಕಾಲುರುಳಿ, ವಾಲೆ, ಮೂಗುತಿ, ಚಿಂತಾ ಕು, ಕೀಲುಕಡಗ, ಕೈಸರು, ಬಂಗಾರದ ಬಳೆಗಳು ಮುಂತಾದ ಒಡವೆಗಳನ್ನು ಧರಿಸಿದ್ದ ನರ್ತಕಿ ಬಾಲೆಯರು ಸಭೆಯನ್ನಲಂಕರಿಸಿದ್ದರು. ಸಭಾಮಂದಿರದ ಮುಂಭಾಗದಲ್ಲಿ ಮದಗಜಗಳೂ, ಕುದುರೆಗಳೂ, ಕಾಲಾಳುಗಳೂ ನಿಂತಿದ್ದವು. ಇಂತಹ ಸಭಾಮಂದಿ ರವನ್ನು ತೋರಿಸುತ್ತಾ ದಂಡನಾಯಕರು ಕಸವನಾಯಕ ಮತ್ತು ಗಂಗನಾಯಕ ರನ್ನು ಕರೆದುಕೊಂಡು ಬಂದು ಭೂಮಂಡಲಾಧೀಶ ನರಸಿಂಗರಾಯನನ್ನು ಕಾಣಿಸಿ ದರು. ಈರ್ವರೂ ಕರಗಳನ್ನು ಮುಗಿದು ಕಾಣಿಕೆಯನ್ನೊಪ್ಪಿಸಿ ಈರೀತಿ ಬಿನ್ನವಿಸಿ ಕೊಂಡರು: "ಬೂದಿಹಾಳು ಪಟ್ಟಣದರಸು ಸಿರುಮನು ಸುತ್ತಣರಸರ ಸೀಮೆಯನ್ನು ಮುತ್ತಿ, ನೆರೆಯ ಹಳ್ಳಿಗಳನ್ನು ತನ್ನ ದೇಶಕ್ಕೆ ಸೇರಿಸಿಕೊಳ್ಳುತ್ತಾ ರಾಜಕಂಟಕವಾ ಗಿರುವನು. ಅವನಬಳಿ ಹತ್ತುಸಾವಿರ ಕಾಲಾಳೂ, ಏಳ್ನೂರು ವಾಜಿಗಳೂ ಉಂಟು. ಅವನ ಶೂರರಾದ ಐದುಜನ ಮಕ್ಕಳು ಯುದ್ಧಚತುರರಾಗಿ ಯಾರನ್ನೂ ಲಕ್ಷಿಸದೆ ಗರ್ವದಿಂದಿರುವರು. ನಮ್ಮ ಕಾಲಾಳುಗಳನ್ನು ಕೊಂದು ನಮ್ಮೆಲ್ಲರನ್ನೂ ಅಳುಕಿಸಿ ರುವನು. ಅವನ ರಾಜ್ಯವು ಸುಭಿಕ್ಷವಾಗಿದೆ; ಹಿರಿಯಂಗಳ ಚಿಕ್ಕಂಗಳ ಎಂಬ ಗ್ರಾಮ ಗಳಲ್ಲಿ ಅಡಿಕೆ ತೆಂಗು ಬಾಳೆತೋಟಗಳು ಸೊಂಪಾಗಿವೆ. ಅವು ಲಕ್ಷವರಹ ತೆರಿಗೆಯನ್ನು ಕೊಡುವವು. ತಂಗಾಲಿ, ಮಚ್ಚೇರು, ಪಟ್ಟಣಗೆರೆ ಗ್ರಾಮಗಳು ತೆಂಗು, ಹಲಸು,

ಕಿತ್ತಳೆ ಮುಂತಾದ ಫಲವೃಕ್ಷಗಳಿಂದ ನಿಬಿಡವಾಗಿವೆ. ಅವುಗಳನ್ನು ವರ್ಣಿಸಲಾರೆವು. ಯಗಟೇಬಳಿಯ ಸಿಗಟಗೆರೆಯನ್ನು ಹೊಕ್ಕು ಬಾಗಿಲುಹಾಕಿಸಿರುವನು. ವೇದಾವತೀ ಹೊಳೆ-ಸಾಲು ಗ್ರಾಮಗಳೆಲ್ಲಾ ಅವನ ವಶವಾಗಿವೆ. ಮಿಕ್ಕ ಸೀಮೆಗಳ ಪಾಡೇನು ? ಭೂಮಂಡಲಾಧಿಪನೇ ! ತಮ್ಮಮುಂದೆ ಹೆಚ್ಚು ಹೇಳುವುದೇನಿರುವುದು ? ಆ ಗೊಲ್ಲ ನಾಳುವ ಸೀಮೆಯೊಳಗೆ ಇರುವ ಹುಲ್ಲೆಗಳು ಮಾನವರನ್ನು ಕೊಲ್ಲುತ್ತಿವೆ. ಸಿರುಮನು ನಮ್ಮ ರಾಜ್ಯವನ್ನು ಹೊಕ್ಕು ಹಳ್ಳಿಗಳನ್ನು ಸುಟ್ಟು ದನಕರುಗಳನ್ನು ಹಿಡಿದುಕೊಂಡು ಹೋಗಿ ಬೂದಿಹಾಳಿನಲ್ಲಿ ಕಟ್ಟಿಕೊಂಡಿರುವನು. ನಾವು ಯಾದಿಯಮಾತನ್ನು ಹೇಳುತ್ತಿಲ್ಲ. ಜಂಭಗಾರ ಸಿರುಮನನ್ನು ಹಿಡಿದು ಶಿಕ್ಷೆಮಾಡಿ ನಮ್ಮನ್ನು ಸಲಹಬೇಕು." ಇದನ್ನೆಲ್ಲಾ ಲಾಲಿಸಿ ನರಸಿಂಗರಾಯನು,

ಸಾಂ ॥ ಮಂದಸ್ಮಿತ ಮುಖನಾಗುತ ರಾಯನಿಂ ।
ತೆಂದ ನೆಕ್ಕಟ ಗಂಗಯ್ಯನೆ ॥
ಕೊಂಡುಕೊಟ್ಟರೆ ಸಿರುಮನ ನೀವು ನಮಗೆ ಮಾ ।
ಳ್ಪೆಂದದಾವುದು ಪೇಳಿರೆನಲು ॥

ಅದಕ್ಕೆ

ಮೇಲುನಾಡನು ಕಾಣಿಕೆಕೊಟ್ಟು ನಾವೆಲ್ಲಾ ।
ಓಲೈಸುವೆವು ನಿಮ್ಮಡಿಯಾ ॥
ಊಳಿಗವನು ಮಾಡಿಬದುಕುವೆವೆಂದಾಗ ।
ಪೇಳಿದ ಮತ್ತೆ ಗಂಗಯ್ಯ ॥

ನರಸಿಂಗರಾಯನು ತನ್ನ ಪ್ರಧಾನರೊಡನೆ ಆಲೋಚಿಸಿ, ಓಲೆಗಳನ್ನು ಬರೆಸಿ ಎಂಟು ದಿಕ್ಕಿನ ರಾಯರನ್ನೂ ಕರೆಸಿದನು. ಗೋರಂಟೆಯ ತಿಪ್ಪರಾಜನು ಎಂಟುಸಾವಿರ ಕುದುರೆ ಇಪ್ಪತ್ತುಸಾವಿರ ಕಾಲಾಳುಗಳೊಡನೆ ಬಂದನು. ಗಂಡಿಕೋಟೆಯ ತಿರುಮಲರಾಜ, ತಾಡಪತ್ರಿಯ ಸಿಂಗರಾಜ, ಮುಂತಾದವರು ಬಂದು ಸೇರಿದರು. ಮೇಲನಾಡು ನಾಯಕರು, ಕೀಳ್ನಾಡು ತಿಗುಳರೂ ಬಂದರು. ಕರಿ, ತುರಗ, ಕಾಲಾಳು ನೆಲಹೊರದಂತೆ ಬಂದು ಸೇರಿತು. ಇಂಥಾ ದೊಡ್ಡ ಸೇನೆಯೊಡನೆ ನರಸಿಂಗರಾಯನು ಉತ್ತಮ ಘಳಿಗೆಯಲ್ಲಿ ಪಯಣಮಾಡಿ ತಿರುಮಲದ ವೆಂಕಟೇಶನನ್ನು ಕಂಡು

ಸಾಂ ॥ ಹರಿಯೆ ಮುರಾರಿ ಮುಕುಂದ ಜನಾರ್ದನ ।
ಸುರಮುನಿವಿನಮಿತ ಚರಣಾ ॥
ದುರಿತದೂರನೆ ಸರಸಿಜನಾಭಾ ಜಯವೆಂದು ।
ನರನಾಥ ಮೊಯ್ಯನಿಕ್ಕಿದನು ॥

ಅಷ್ಟವಿಧ ಅರ್ಚನೆ ಪೂಜೆ ನೈವೇದ್ಯದಿ ।
ತೃಪ್ತಿಬಡಿಸಿ ದೇವರನ್ನು ॥

ಸಾಷ್ಟಾಂಗವೆರಗಿ ಕಾಣಿಕೆಯಿಟ್ಟು ರಾಯ ತ ।
ನ್ನಿಷ್ಟಾರ್ಥವ ಬೇಡಿಕೊಂಡ ॥
ಸಾಂ ॥ ನಡೆವ ಕಾರ್ಯವು ಸಾಧ್ಯವಾಯಿತ್ತದರೆ ನಿಂಸ ।
ಗುಡಿಗೆ ತೊಡಿಸುವೆ ಚಿನ್ನವಸ್ನು ॥
ಕೊಡುವೆನು ನವರತ್ನ ಪದಕವ ತಾನೆಂದು ।
ನುಡಿದ ರಾಜೇಂದ್ರ ದೇವರೊಳು ॥

ಅಲ್ಲಿಂದ ಹೊರಟು ಭೀಮಾವರದ ಬಯಲು, ರಂಗ ಸಮುದ್ರ, ಘೋರಂಟೆ ಮುಂತಾದೆ ಡೆಗಳಲ್ಲಿ ಬೀಡು ಬಿಡುತ್ತಾ ಪೆನುಗೊಂಡೆಗೆ ಬಂದು ಸಿಂಹಪೀಠದಲ್ಲಿ ಕುಳಿತು ಓಲಗ ವಿತ್ತನು. ಮಾಂಡಲೀಕರನ್ನೂ ಮನ್ನೆಯರನ್ನೂ ಕರೆಸಿ ಯರಮಿಂಚಿ ಬಾಗಿಲ ಬಯಲಿನಲ್ಲಿ ಫವುಜನ್ನು ಪ್ರವೇಶಿಸಬೇಕೆಂದು ತಿಳಿಸಿದನು. ಗಂಮ್ಮ ರಾಜ, ತಿಮ್ಮರಾಜ, ಗುರುವರಾಜ, ತಮ್ಮರಾಜ, ಬಸವರಾಜ, ಕೊಮ್ಮರಾಜ, ಕೊನೇಟರಾಜ, ಅಪ್ಪರಸಯ್ಯ, ವೀರಬಸವರಾಜ, ತಿಪ್ಪರಾಜ, ತಿಮ್ಮರಾಜ, ವೀರ ಬಾಣ, ಬೊಮ್ಮಯ್ಯ, ಬೊಳಕು ನಾಗ, ವೀರವೊರಸ, ರಾಮರಾಜ ಮುಂತಾದ ವರು ತಮ್ಮ ತಮ್ಮ ಕಾಲಾಳು, ಕುದುರೆ, ಆನೆ ಫವುಜುಗಳನ್ನು ತಂದು ಬಯಲಿನಲ್ಲಿ ನಿಲ್ಲಿಸಿದರು. ಈ ರೀತಿಯಲ್ಲಿ ನೆರೆದಿದ್ದ ಸೇನೆಯನ್ನು ಕಂಡು ಭೂಪತಿ ನರಸಿಂಗ ರಾಯನು ಮನಮೆಚ್ಚಿ ಮರಳಿ ಪೆನುಗೊಂಡೆಗೆ ಪರಿವಾರ ಸಹಿತ ನಡೆದನು.

ಅಲ್ಲಿಂದ ಹೊರಟು ಹರುವೆ ನಗರದ ಕೆರೆಯ ಬಳಿ ಬೀಡು ಬಿಟ್ಟನು. ಮುಂದಕ್ಕೆ ಹೊರಟು ಪ್ರಯಾಣ ಮಾಡಲು ಮಿಡಿಗೇಸಿಯ* ಓಬನಾಯಕನು ಅಟ್ಟ ಹಾಸದಿಂದ ರಾಯನನ್ನು ಎದುರಿಸಲು ರಾಯನು ಕೋಪಗೊಂಡು ಮಿಡಿಗೇಸಿಯ ಮೇಲೆ ಸೇನೆ ಯನ್ನು ನಡೆಸಿ ಓಬನಾಯಕನನ್ನು ಕೊಂದು ಠಾಣ್ಯಹಾಕಿದನು.

ಅನಂತರ ಪಾಳೆಯವು ಮುಂದಕ್ಕೆ ಪ್ರಯಾಣ ಮಾಡಿ ಮೂಡಣ ಹಿರಿಯೂರು ಬಳಿಯ ಹೊಳೆಯ ತೀರದಲ್ಲಿ ಬೀಡು ಬಿಟ್ಟಿತು.

ಸಾಂ ॥ ಮಾಡಿಸಿದನು ಕಸವೇಂದ್ರ ಬಿಡಾರವ ।
ರೂಢಿಗೆ ಅತಿಪೊಸತೆನಿಸಿ ॥
ಕೊಡಕುಳ್ಳಿ ನವಿಲುಯ್ಯಲೆಗಳಾ ಕರು ।
ಮಾಡ ಚಿತ್ರವರಮನೆಯಾ ॥

ಹೊನ್ನುವಳ್ಳಿಯ ವೇದರಾಜ, ಕೇಶವರಾಜ, ರುದ್ರರಾಜಯ್ಯ, ಚನ್ನಮರಾಜ, ಚಿಟ್ಟೆ ಯರಾಜ ಮುಂತಾದ ಕರ್ನಾಟರಾಜನು ರಾಯನನ್ನು ಕಂಡು ಕಾಣಿಕೆಯನ್ನೊಪ್ಪಿ ಸಿ ದರು. ರಾಯನು ಅವರಿಗೆ ಉಡುಗೊರೆಯನ್ನಿತ್ತು ಮುಂದಿನ ಕಾರ್ಯಕ್ಕೆ ಸಿದ್ಧರಾಗ ಬೇಕೆಂದು ಅಪ್ಪಣೆಮಾಡಿದನು. ಬೇಹುಭಟರು ಸಿರುಮನಿಗೆ ಈ ಸುದ್ದಿಯನ್ನು ತಿಳಿಸಿದರು.

* ಮಿಡಿಗೇಸಿಕೋಟೆ M. A. R. 1938 Plate V 3 & VII.

೪

## ಬಾಗೂರು ಕಗ್ಗೊಲೆ

ಬಾಗೂರು ಗೋವಿಂದ ಮತ್ತು ಬೂದಿಹಾಳಿನ ಗೊಲ್ಲ ಸಿರುಮ ಈ ಈರ್ವರೂ ಭೇದವಿಲ್ಲದೆ ಸ್ನೇಹಿತರಾಗಿರುವರು. ನಾವು ಈಗ ದಂಡನ್ನು ತೆಗೆದುಕೊಂಡು ಹೋಗಿ ಬೂದಿಹಾಳನ್ನು ಮುತ್ತಿದರೆ ಸಿರುಮನ ಸಹಾಯಕ್ಕಾಗಿ ಗೋವಿಂದನು ಬಂದು ಕಾದದೇ ಬಿಡುವುದಿಲ್ಲ. ಆದ್ದರಿಂದ ಮೊದಲು ನಾವು ಬಾಗೂರಿಗೆ ಹೋಗಿ ಮುತ್ತ ಬೇಕೆಂದು ಎಕ್ಕಟಿಗ ಗಂಗಯ್ಯನು ನರನಾಥ ನರಸಿಂಗರಾಯನಿಗೆ ಬಿನ್ನವಿಸಿದನು. ಹೊನ್ನವಳ್ಳಿಯ ವೇದರಾಜನೂ ಗಂಗಯ್ಯನ ಬಿನ್ನಪವನ್ನು ಅನುಮೋದಿಸುತ್ತಾ ಗೋವಿಂದನ ದರ್ಪವನ್ನು ಮುರಿದರೆ ಸಿರುಮನ ಬಲವು ಅರ್ಧ ಕುಗ್ಗಿದಂತಾಗುವುದು ಎಂದು ಕೈಮುಗಿದು ಹೇಳಿದನು. ರಾಯನ ಅಪ್ಪಣೆಯಂತೆ ದಂಡು ಮುಂದಕ್ಕೆ ಹೊರ ಟಿತು. ಕರಿ ತುರಗ ಕಾಲಾಳುಗಳ ಕೆಂಧೂಳು ಅಂಬರವನ್ನು ಮುಸುಕಿತು. ಭೇರಿ, ತಂಬಟೆ, ನಿಸ್ಸಾಳಗಳು ಮೊಳಗಿದುವು. ಫಣಿಪತಿಯು ಹೆಡೆ ಕುಸಿಯುವಂತೆ ದಂಡು ಬಾಗೂರಿಗೆ ನಡೆಯಿತು.

ಕುಮಾರ ಮಲ್ಲಯ್ಯನು ಇದನ್ನು ಕೇಳಿ ರಾಯನ ಸೇನೆಯ ಹಿಂಭಾಗದಲ್ಲಿ ಹೋಗುತ್ತಿದ್ದ ಭಟರನ್ನು ಕೊಂದು, ಜಲ್ಲಿ ಭಂಡಾರ ಬೊಕ್ಕಸದ ಪೆಟ್ಟಿಗೆಗಳನ್ನು ಸೂರೆಗೊಂಡು, ಬೂದಿಹಾಳಿಗೆ ಹೋಗಿ ತಂದೆಗೊಪ್ಪಿಸಿದನು. ನರಸಿಂಗರಾಯನು ಇದನ್ನು ಕೇಳಿ ಘುಡಿಘುಡಿಸುತ್ತಾ ಬೂದಿಹಾಳಿಗೆ ಈಗಲೇ ದಂಡು ಸಾಗಲಿ; ಸಿರು ಮನ ತಲೆಯನ್ನರಿವೆನು ಎಂದು ಗರ್ಜಿಸಲು, ದಳಪತಿಯು ಕರಗಳ ಮುಗಿದು "ಇರಲಿ! ಬೊಕ್ಕಸದ ಪೆಟ್ಟಗೆಗಳು ಸಿರುಮನ ಮಗನ ಹರಣಕ್ಕೆ ಇಕ್ಕಿದ ಸಂಚಕಾರ" ಎಂದು ರಾಯನನ್ನು ಸಮಾಧಾನ ಮಾಡಿ ಬಾಗೂರು ಬಯಲಿಗೆ ಬಂದು ಫವುಜನ್ನು ಇಳಿಸಿದನು.

ರಾಯನ ಫವುಜು ಬಾಗೂರು ಕೋಟೆಯನ್ನು ಮುತ್ತುವುದಕ್ಕೆ ಬರುತ್ತಾ ಇದೆ ಎಂದು ಗೋವಿಂದನು ಬೇಹುಗಾರರಿಂದ ತಿಳಿದು ತನ್ನ ಸೇನೆಯನ್ನು ಕೋಟೆಯ ಹೊರಗಡೆ ನಿಲ್ಲಿಸಿ ಮುಂಚೂಣಿ ಕಾಳಗಕ್ಕೆ ಸ್ವಲ್ಪ ಬಲವನ್ನು ಕಳುಹಿಸಿದನು. ಮುಂಚೂಣಿಯಲ್ಲಿ ಉಭಯ ದಳಗಳಲ್ಲಿಯೂ ಅನೇಕರು ಮಡಿದರು. ರಾಯನ ದಂಡು ಮುಂದುವರಿದು ಕೋಟೆಯ ಬಳಿಗೆ ಬರಲು ಗೋವಿಂದನು ತನ್ನ ಬಲಸಹಿತ ಕೋಟೆಯ ಒಳಹೊಕ್ಕು ಹೆಬ್ಬಾಗಿಲುಗಳನ್ನು ಹಾಕಿಸಿದನು. ಎಲ್ಲರಿಗೂ ಭೀತಿಯು ಹಬ್ಬಿತು. ಪುರಜನರು ತಬ್ಬಿಬ್ಬುಗೊಳ್ಳುತ್ತಿದ್ದರು. ನರಸಿಂಗರಾಯನ ದಂಡು

ಬಂದು ಬಾಗೂರು ಕೋಟೆಯನ್ನು ಸುತ್ತಿ ಪಾಳೆಯ ಬಿಟ್ಟಿತು. ಗುಡಿ ಗುಡಾರಗಳು ಎದ್ದು ನಿಂತವು. ತುರುಗಾಲಯಗಳೂ, ದನದ ಕೊಟ್ಟಿಗೆಗಳೂ, ಅಂಗಡಿ ಬೀದಿಗಳೂ ಅಂಗನೆಯರ ಕೇರಿಗಳೂ ಏರ್ಪಟ್ಟವು. ಮಧ್ಯಭಾಗದಲ್ಲಿ ರಾಯನ ಓಲಗಶಾಲೆಯು ಕಂಗೊಳಿಸಿತು. ಸೂರ್ಯನು ಮುಳುಗಲು ರಾತ್ರಿಯ ಪಂಜಿನ ಬೆಳಕಿನಲ್ಲಿ ಪಾಳೆಯವು ಮನೋಹರವಾಗಿ ಪ್ರಕಾಶಿಸುತ್ತಿತ್ತು.

ಉದಯವಾದ ಮೇಲೆ ರಾಯನ ದಂಡು ಬೊಬ್ಬೆ ಇಡುತ್ತಾ ಕೋಟೆಯನ್ನೇರಲು ಹವಣಿಸಿತು. ಕೋಟೆಯನ್ನು ಆವರಿಸಿರುವ ಭಾರಿ ಅಗಳುಗಳನ್ನು ಮುಚ್ಚಿ, ನೆಲಸಮ ಮಾಡುತ್ತಾ ಎಂಟು ದಿಕ್ಕಿನಿಂದಲೂ ಕೋಟೆಯನ್ನಡರಲನುವಾದರು. ಬಾಗೂರು ಕೋಟೆಯೊಳಗಿನವರಾದರೋ ವೈರಿತಂಡಗಳ ಮೇಲೆ ಎತ್ತುಗಲ್ಲುಗಳನ್ನು ಹಾಕುತ್ತಾ, ಈಟಿಗಳಿಂದ ತಿವಿಯುತ್ತಾ ನೂಕುತ್ತಿದ್ದರು. ಅನೇಕರನ್ನು ಹೊಡೆದು ಅಗಳಿಗೆ ನೂಕಿದರು. ನರಸಿಂಗರಾಯನ ಸೈನಿಕರು ಭಾಷೆ ಮಾಡುತ್ತಾ ಬೊಬ್ಬೆಯಿಡುತ್ತಾ ಕೋಟೆಯನ್ನು ಹತ್ತುತ್ತಿದ್ದರು. ಬಾಗೂರಿನವರು ಕೋಟೆಯ ಮೇಲಿನಿಂದ ಕಾದಮಳಲು, ಸಾಸುವೆ, ಸುಣ್ಣದಪುಡಿ ಕಾದ ಅಂಬಲಿಗಳನ್ನು ಸುರಿಯುತ್ತಿರಲು ಹೆಣವಾಗಿ ಬಿದ್ದವರ ಸಂಖ್ಯೆ ಲೆಕ್ಕವಿಲ್ಲವಾಯಿತು. ಇದನ್ನು ಕಂಡು ಬಲ್ಲಿದರಾದ ದೊರೆಗಳು ರೇಗಿ ತಮ್ಮ ತಮ್ಮ ಫವುಜನ್ನು ಕಳುಹಿಸಲು ಬಾಗೂರು ಅಂದಿನ ಕಾಳಗಕ್ಕೆ ತಲ್ಲಣಿಸಿಹೋಯಿತು.

ಒಂದು ದಿನದ ಕಾಳಗಕ್ಕೇ ತಲ್ಲಣಿಸಿಹೋದ ಗೋವಿಂದನು ಭೂಮಂಡಲಾಧಿಪತಿಗೆ ಕೈಸೆರೆಯಾದೆನೆನ್ನುತ್ತಾ ಚಿಂತಿಸಿದನು. ಸಿರುಮನ ಸಹಾಯವನ್ನು ಅಪೇಕ್ಷಿಸಿ ಒಂದು ಓಲೆಯನ್ನು ಬರೆದನು. ಅದನ್ನು ಮಣಿಹಾರನ ಕೈಗೆ ಕೊಟ್ಟು ಅವನಿಗೆ ಉಡುಗೊರೆಗಳನ್ನಿತ್ತು ನೀರಬಾಗಿಲ ಬಳಿಯ ದಿಡ್ಡೀಬಾಗಿಲಿನಿಂದ ಹೊರಕ್ಕೆದಾಟಿಸಿ ಬೂದಿಹಾಳಿಗೆ ಕಳುಹಿಸಿದನು. ಮಣಿಹಾರನು ಚಂಡಿನಂತೆ ಪುಟನೆಗೆದು ಎರಳೆಯಂತೆ ಚಿಮ್ಮಿಚಿಮ್ಮಿ ಹಾರುತ್ತಾ ನೀರ್ಗುಂದದ ದಾರಿಯನ್ನು ನಿಮಿಷಮಾತ್ರದಲ್ಲಿ ದಾಟಿ ಕೆಲ್ಲೋಡು ಬಳಿ ಬಂದು ವೇದಾವತಿಯನ್ನು ದಾಟಿದನು. ನೇರಲಕೆರೆ ಮಾರ್ಗವಾಗಿ ಬಂದು ಬೂದಿಪುರದ ಮೂಡಣ ಬಾಗಿಲಬಳಿ ಕಪ್ಪರ ವೀರಣ್ಣನಿಗೆ ಶರಣುಮಾಡಿ ಊರೊಳು ಪೊಕ್ಕು ಸಿರುಮ ಭೂಪಾಲನಿಗೆ ತನ್ನ ಬರುವಿಕೆಯನ್ನು ತಿಳಿಸಿದನು. ಮುತ್ತಿನ ಚಾವಡಿಯಲ್ಲಿ ಚದುರಂಗವಾಡುತ್ತಿದ್ದ ಸಿರುಮನು ಮಣಿಹಾರನನ್ನು ಕರೆಸಿ ಬಾಯ ಒಕ್ಕಣಿಕೆಯನ್ನು ತಿಳಿದುಕೊಂಡನು. ಸಿರುಮನು ಸಭೆಮಾಡಿ ಗೋವಿಂದನ ಓಲೆಯ ಒಕ್ಕಣಿಕೆಯನ್ನು ಸಭಿಕರಿಗೆ ತಿಳಿಸಿ, ಬಾಗೂರನ್ನು ಮುತ್ತಿರುವ ರಾಯನ ದಂಡನ್ನು ಕಂಗೆಡಿಸಿ, ಗೋವಿಂದನನ್ನು ರಕ್ಷಿಸಿ ಕೀರ್ತಿಯನ್ನು ಪಡೆಯಲು ಇದು ಸುಸಮಯ ಎಂದು ಹೇಳಿದನು. ದೊರೆಯ ಮಕ್ಕಳು, ಹೆಸರಾದ ವೀರರು ನಾ

ಮುಂದು ತಾಮುಂದು ಎಂದು ಮುಂದೆನುಗ್ಗಿ ವೀಳೆಯವನ್ನು ಬೇಡಿದರು. ರಾಜನು ಕಲ್ಲರಸ ಮಂತ್ರಿಯ ಅಭಿಪ್ರಾಯವನ್ನು ಕೇಳಿದನು. ಕುಮಾರ ಮಲ್ಲಯ್ಯನೂ, ವೀರ ಭದ್ರನೂ ಮಹಾ ಶೂರರೇನೋ ನಿಜ. ಚತುರೋಪಾಯದಲ್ಲಿ ಮಿಕ್ಕವರು ಇವರಿಗೆ ಎಣೆಯಿಲ್ಲ. ಆದರೆ ಕಾಚಯ್ಯನು; ಬುದ್ಧಿಬಲ್ಲ ಅತುಳ ವೀರಭಟನು; ಇವನೊಡನೆ ಗೆಲ್ಲುಗಯ್ಯ ವೀರರನ್ನು ಕಳುಹಿಸುವುದು ಲೇಸೆಂದು ಕಲ್ಲರಸನು ನುಡಿದನು. ಎಂಟು ದಿಕ್ಕಿನ ರಾಯರ ಗಂಡ, ಒಂಟಿಬಾವಲಿ ಸರಪಣಿಯ ಭಂಟರೊಳಭಂಟ, ಮುತ್ತಿನ ಕಂಟಮಾಲೆಯ ಕುವರ, ಮಲೆವರಾಯರ ಗಂಡ, ಚಲದಂಕ ಮಲ್ಲ ಎಂಬ ನಾನಾ ಬಿರುದುಗಳ ವೀರ ಹಿರಿಯ ಕುಮಾರ ಕಾಚಯ್ಯನಿಗೆ ಸಿರುಮನು 'ಕಲಿಸಾಳ್ವ'ಎಂಬ ಕುದುರೆಯನ್ನು ತರಿಸಿಕೊಟ್ಟು ಹಿರಿಯ ಬಿರುದಿನ ವೀರರು ಕೂಡಿ ಬಾಗೂರಿಗೆ ತೆರಳುವು ದೆಂದು ನೇಮವಿತ್ತನು. ವಿರುಪ, ಹಾಲಕುರಿಕೆಯ ಹನುಮ, ಕೊಂಡದ ಬಸವಯ್ಯ, ಜೋಗಾರ ವೀರ, ಮತ್ತೋಡಿನ ಗಿಡ್ಡಗಿರಿಯ, ಮಾದಿಗರ ಸಂಗ, ಉಪ್ಪಿನಹಳ್ಳಿಯ ಜೋರ, ಕೊಟಗಾರ ತಿಪ್ಪಯ್ಯ, ಆಸಂದಿಯ ಮಲ್ಲುಗ, ಗೋಸೀಕೆರೆಯ ಗೊಲ್ಲವೀರ, ಚಿಪ್ಪಿಗ ಕಲ್ಲ, ಕಣಿಕಟ್ಟೆ ಸಿದ್ದ, ಅಳಿಯ ತಿಪ್ಪಯ್ಯ, ಚಲದಂಕ ಮಲ್ಲರಾವುತ, ಅಗಸರ ತಿಮ್ಮ, ಹೆಗ್ಗೆರೆ ತಳವಾರ ವೀರ, ಚಿಕ್ಕಚಿಣ್ಣ, ಒಕ್ಕಲಿಗರ ಮುದ್ದ, ಅಕ್ಕಸಾಲೆಯ ಕಂಪ ಯ್ಯ ಬಸವ, ಚಿಕ್ಕಲಕ್ಕ, ಉಪ್ಪಲಿಕಾರ ಹೊನ್ನಕಳಸ, ಕಂಪಕನ್ನಗ, ಜಗಝಂಪಿನ ಭೈರ, ಕೆಂಪುಖಂಡೆಯದ ಹೊನ್ನುಗ, ಹಂಪ, ಹನುಮ, ಹಡಪದ ಸೋಮ ಮುಂತಾದ ಅಸಹಾಯಶೂರರು ಬಂದು ಕಾಚಯ್ಯನಿಗೆ ಕೈಮುಗಿದರು. ಸಿರುಮ ಭೂಪಾಲನು ಲಿಂಗರಾವುತನಿಗೆ ಬೊಲ್ಲನನ್ನೂ, ಅಳಿಯ ತಿಪ್ಪಯ್ಯನಿಗೆ ವೇದರಾಜನು ಕಳುಹಿಸಿದ್ದ ವಾರುಪನನ್ನೂ, ಈಶರಾವುತನಿಗೆ ಸಂಪಿಗೆಯನ್ನೂ ಶಂಕಾರಾವುತನಿಗೆ ಶಂಕಪಾಲ ನನ್ನೂ ತಮ್ಮ ಮಲ್ಲಯ್ಯನಿಗೆ ವಿಜಯನನ್ನೂ ತರಿಸಿಕೊಟ್ಟನು. ಈರೀತಿ ವೀರರು ಹೆಸ ರಾದ ಉತ್ತಮಾಶ್ವಗಳನ್ನು ಏರಿ ಕಾಚಯ್ಯನಿಗೆ ಸಹಾಯವಾಗಿ ಹೊರಟರು. ಸಿಂಹದ ನೆರವಿಯೋ, ಶರಭದ ಜಂಗುಳಿಯೋ, ಶರಧಿ ಮಧ್ಯದಿಂದ ಲಂಘಿಸಿದ ಬಡಬಾಗ್ನಿಯೋ ಎಂಬ ಪರಿಯಂತೆ ವೀರರ ಪಡೆಯು ಶೋಭಿಸಿತು. ಕಾಚನಾಯಕನು ಸಮರಸನ್ನಾಹ ದಿಂದ ನೆರೆದ ಸೇನೆಗೆ ಕೈಮುಗಿದು ಅವರನ್ನು ಸಂಬೋಧಿಸಿ ವೀರಭಾಷಣವನ್ನು ಮಾಡಿದನು. ಮುಂದಕ್ಕೆ ಇಟ್ಟ ಹೆಜ್ಜೆಯನ್ನು ಹಿಂದಕ್ಕೆ ತೆಗೆಯದೆ ನಮ್ಮ ರಾಜ್ಯಕ್ಕೆ ಕುಂದುತರದೆ ಇರುವ ಭಂಟರು ಮಾತ್ರ ಮುಂದಕ್ಕೆ ನಡೆಯಿರಿ. ಓಡಿ ನಾಚುವ ವರೂ, ಸಮರದ ಹುಯ್ಯಲಕಂಡು ಹೇಡಿಯಾಗುವವರೂ ಇಲ್ಲಿಯೇ ನಿಲ್ಲಿರಿ. ಗಾಯ ಗಳಿಗೆ ನೊಂದು ಅಂಜದೆ ಮುಂದೆ ನುಗ್ಗುವವರೂ, ಸ್ವರ್ಗದ ಬಾಗಿಲನ್ನು ಹೊಗುವ ಆಶೆಯುಳ್ಳವವರೂ ಮಾತ್ರ ಬನ್ನಿ ಎಂದು ವೀರಾವೇಶದಿಂದ ನುಡಿದನು. ಅನಂತರ ಗಂಧ ಕಸ್ತೂರಿ ಪರಿಮಳವನ್ನೂ, ಕರ್ಪೂರ ವೀಳೆಯವನ್ನೂ ತರಿಸಿಕೊಟ್ಟು, ತನ್ನ ಅರಮನೆಗೆ ಹೋದನು.

ಕಟ್ಟಾಳು ಕಾಚಯ್ಯನು ಮಲ್ಲಗಂಟೆಕ್ಕಿ ಕಾಸೆಯನ್ನುಟ್ಟನು. ಕೆಗ್ಗಟ್ಟೊ ಗೊಂಡೆಯ, ಹಾರ ಪದಕ, ಕಂಠಮಾಲೆಗಳನ್ನು ತೊಟ್ಟನು. ಬಾಗೂರಿಗೆ ಹೋಗಿ ಮುತ್ತಿಗೆಮಾಡಿರುವ ಶತ್ರುಗಳೊಡನೆ ಕಾದುತ್ತಿರುವ ಗೋವಿಂದನಿಗೆ ಸಹಾಯವಾಗಿ ಮೇಲುಯ್ಯಲು ಮಾಡಲು ಹೊರಟಿರುವೆನು ಎಂದು ತನ್ನ ರಾಣಿಯರಿಗೆ ಹೇಳಲು ಅವರು ಕಾಚನ ಮುಖಕ್ಕೆ ಕಸ್ತೂರಿತಿಲಕವನ್ನು ತಿದ್ದಿಟ್ಟು ಉಪಚರಿಸಿ ಬೀಳ್ಕೊಡಲು ತನ್ನ ತಾಯಿಯ ಅರಮನೆಗೆ ನಡೆದನು.

ಸಮರ ಸಿಂಗಾರವಮಾಡಿಕೊಂಡು ಕಾಚನಾಯಕನು ತಾಯಿಯನ್ನು ಕಂಡು ಅಡಿಗೆರಗಲು ತಾಯಿಯು ಹಿಡಿದೆತ್ತಿ ಗಲ್ಲವನ್ನು ಹಿಡಿದು ಉಪಚಾರದ ಮಾತುಗಳ ನ್ನಾಡಿ ಶಶಿರವಿಯರುಳ್ಳತನಕ ಈ ಧರಣಿಗೊಡೆಯನಾಗಿರೆಂದೂ, ಧುರವಿಜಯನಾಗಿ ಜಯಲಕ್ಷ್ಮಿಯನ್ನು ಬಲದಲ್ಲಿ ಧರಿಸೆಂದೂ ಹರಸಿದಳು. ಬಾಗೂರಿಗೆ ಹೋಗಿ ನರ ಸಿಂಗರಾಯನ ದಳವನ್ನು ಕೋಲಾಹಲಮಾಡಲು ಹರಸಿ ಅಪ್ಪಣೆಯನ್ನು ಪಾಲಿಸೆಂದು ಬೇಡಿದನು. ಭೂಮಂಡಲಾಧಿಪ ನರಸಿಂಗರಾಯನೊಡನೆ ಕಾದಲು ಬಾಗೂರಿಗೆ ಹೋಗೆಂದು ನಿಮ್ಮಯ್ಯ ನುಡಿದನೇ? ನಿನ್ನನ್ನು ಕಳುಹಿ ಒಡಲ ಹಿಡಿಯಲಾರೆನು ಕಡುಮಾನವು ಸಾಕು. ಕಷ್ಟದ ಸುದ್ದಿಯನ್ನು ಹೇಳಿ ನನ್ನನ್ನು ದುಃಖಕ್ಕೀಡು ಮಾಡಿದೆ. ದೊರೆಯ ಜನ್ಮವನ್ನು ಸುಡಲಿ ಎನ್ನುತ್ತಾ ಮಕ್ಕಳಂತೆ ಮಿಡುಕುತ್ತಾ ಮುಂದಿದ್ದ ಕಂಭವನ್ನು ಹಾಯ್ದು ಅತ್ತಳು. ಅಳುವ ಸತಿಯನ್ನು ಕಂಡು ಸಿ ರು ಮ ಭೂಪಾಲನು ಆಕೆಯ ಕಣ್ಣೀರನ್ನೊರಸಿ ನಳಿತೋಳುಗಳನ್ನಪ್ಪಿ ಸಂತೈಸಿದನು. ಶರಧಿ ಯಂತೆ ನೆರೆದಿರುವ ರಾಯನ ದಂಡನ್ನು ಒಳಹೊಕ್ಕು ಇ ದಿ ರಾ ಂ ತ ಪಟುಭಟರನ್ನು ಇರಿದು ಬಂದು ಕುಮಾರ ಕಾಚಯ್ಯನು ನಮಗೆ ಸಂತೋಷವನ್ನುಂಟುಮಾಡುವನು. ಇದಕ್ಕೆ ಸಂದೇಹವಿಲ್ಲ ಎಂದು ಹೇಳಿದ ತ ಂ ದೆ ಯ ಮಾತನ್ನು ಲಾಲಿಸುತ್ತಾ "ಎದುರಾಂತ ನಾಯಕ ವಾಡಿಗಳನ್ನು ಕೊಂದು ನರಸಿಂಗ ರಾಯನನ್ನು ಅವಮಾನ ಗೊಳಿಸದೇ ಹಿಂತಿರುಗುವೆನಾದರೆ ನಿಮ್ಮ ಬಸಿರಲ್ಲಿ ಬಂದುದಕ್ಕೆ ಸಾರ್ಥಕವೇ?" ಎಂದು ಕಾಚನಾಯಕನು ಪೌರುಷದ ಮಾತುಗಳನ್ನಾಡಿದನು. ತನಯನ ವಿಕ್ರಮದ ನುಡಿ ಗೇಳಿ ತಾಯಿಯು ಹರ್ಷಿಸಿದಳು. ಊಳಿಗದ ಹೆಣ್ಣು ಮಕ್ಕಳು ಬಂಗಾರದ ಗಿಂಡಿ ಯಲ್ಲಿ ನೀರು ತಂದು ಕಾಚನ ಪಾದಗಳನ್ನು ತೊಳೆದರು. ಸಿರುಮನ ರಾಣಿಯರೆಲ್ಲರೂ ಕಾಚನನ್ನು ಮುತ್ತಿನ ಗದ್ದಿಗೆಯ ಮೇಲೆ ಕುಳ್ಳಿರಿಸಿ ಬೆಳ್ಳಿ ಬಂಗಾರದ ಹರಿವಾಣ ಬಟ್ಟಲುಗಳನ್ನು ತಂದಿಟ್ಟು ಷಡ್ರಸಾನ್ನವನ್ನು ಬಡಿಸಿದರು. ತಾಯಿ ಮಕ್ಕಳು ಒಡನೆ ಭೋಜನ ಗೈದು ಕೈತೊಳೆದರು. ಕರ್ಪೂರವೀಳೆಯವನಿತ್ತು,

ಸಾಂ॥ ಧೀರನತಿ ವಿಕ್ರಮನಾಗು ಕೀರ್ತಿಯೊ।
ಳ್ಪೆರುವತ್ತನಾಗರಿಗಳೆಂದೆಂಬಾ ॥

ವಾರಣ ಪಂಚಾಸ್ಯನಾಗೆಂದು ಆ ತಾಯಿ ।
ವೀರ ಸೇಸೆಯನಿಕ್ಕಿದಳು ॥

ತಾಯಿಯಿಂದ ಬೀಳ್ಕೊಂಡು ಕಾಚನಾಯಕನು ಶರಭ ಶಾರ್ದೂಲ ಸಿಂಹಗಳ ಗುಂಪಿನಂತಿದ್ದ ತನ್ನ ಪರಿವಾರದವರೊಡನೆ ಅರಮನೆಯಿಂದ ಹೊರಟನು. ಕೊಂಬು, ತುತ್ತೂರಿ, ಚಿನ್ನಗಹಳೆಗಳರವವೂ, ಸುಭಟರ ಬೊಬ್ಬೆಯೂ ಅಂಬರವನ್ನಡರುತ್ತಿರಲು ಕಗ್ಗೊಲೆಗಾಗಿ ಕುಮಾರ ಕಾಚಯ್ಯನು ಹೊರಟನು. ಕವಿ ಗಮಕಿಗಳಿಗೂ ಯಾಚಕರಿಗೂ ಮನದಣಿವಂತೆ ಹೊನ್ನನ್ನು ಕೊಟ್ಟನು. ಅರಿಜಿನ ಗಿರಿವಜ್ರ, ದಂಡಮಂಡ ವಿಕ್ರಮ, ಶರಧಿ ಬಡಬಾನಲ, ಧುರ ಧೀರ ವಿಕ್ರಮ, ಜಯ ಜಯ ಎಂದು ಬಿರುದಾವಳಿಗಳಿಂದ ಭಟ್ಟಂಗಿಗಳು ಹೊಗಳಿದರು. ಸಿರುಮ ಭೂಪಾಲನು ಪುರದ ಹೊರವಳಯದವರಿಗೂ ತನ್ನ ಕಂದನೊಡನೆ ಬಂದು "ಅಳುಕದೆ ರಾಯನ ದಂಡನ್ನು ಇರಿದು ಬಾಗೂರು ಕೋಟೆಯನ್ನು ಒಳಹೋಗು. ಆ ಕೋಟೆಯನ್ನು ಸೂರೆಗೊಳ್ಳಲು ಬಂದ ಭೂಪಾಲರ ತಲೆಗಳನ್ನು ಚೆಂಡಾಡು. ಗೋವಿಂದನ ನುಡಿಯನ್ನು ಮೀರಿ ನಡೆಯಬೇಡ" ಎಂದು ಬುದ್ಧಿವಾದವನ್ನು ಹೇಳಿ ಜಯಶೀಲನಾಗೆಂದು ಹರಸಿ ಬೀಳ್ಕೊಟ್ಟನು. ಕುಮಾರ ಮಲ್ಲಯ್ಯನು ಅಣ್ಣನಿಗೆ "ತಂದೆಯು ನಿಮಗೆ ವೀಳೆಯವನಿತ್ತನು. ನೀವು ನನಗೆ ವೀಳೆಯವನ್ನು ಪಾಲಿಸಿರಿ" ಎಂದುಬೇಡಲು ಅಣ್ಣನು ಸವಿ ಮಾತುಗಳನ್ನಾಡಿ ತಂದೆಯ ಬಳಿ ಇದ್ದು ಅವನನ್ನು ರಕ್ಷಿಸುತ್ತಿರಬೇಕೆಂದೂ ಧುರವನ್ನು ಜಯಿಸಿ ಮರಳಿದರೆ ಈ ಧರೆಯ ದೊರೆತನವು ಸಿಗುವುದು. ಕಡುಗಲಿತನದಿಂದ ಕಾದಿ ಮರಣವನ್ನೈದಿದರೆ ಸ್ವರ್ಗದ ಭೋಗವು ತಪ್ಪದು" ಎಂದು ಹೇಳಿ ತಮ್ಮನನ್ನು ಆಲಂಗಿಸಿ ಹರಸಿ ತಂದೆಯ ಬಳಿಗೆ ಕಳುಹಿಸಿದನು.

ಪಯಣ ಮಾಡಿ ನರಸಿಂಗರಾಯನ ಪಾಳೆಯಕ್ಕೆ ಬಂದು ಕೂಗಳತೆಯ ದೂರದಲ್ಲಿ ಕಾಚನು ತನ್ನ ಪಾಳೆಯವನ್ನು ಬಿಟ್ಟು, ಸೂರ್ಯನು ಪಡುಗಡಲನ್ನು ಸೇರುವ ಸಮಯವನ್ನು ಕಾಯುತ್ತಿದ್ದನು. ಕತ್ತಲೆ ಕವಿದು ನರಸಿಂಗರಾಯನ ಪಾಳೆಯದಲ್ಲಿ ಎಲ್ಲರೂ ನಿದ್ರೆಯ ಪರವಶರಾದರು. ಸದ್ದು ಅಡಗಿತು. ಕಾಚನ ಭಟರು ಬೊಬ್ಬಿರಿಯುತ್ತಾ ಕಗ್ಗೊಲೆಮಾಡುತ್ತಾ ಶತ್ರುಗಳ ತಲೆಯನ್ನು ಕಡಿಯುತ್ತಾ ಬಾಗೂರು ಕೋಟೆಯ ಕಡೆಗೆ ಸಾಗುತ್ತಿದ್ದರು. ರಾಯನ ದಳದ ಮುಂದಂಡನ್ನು ಹೊಡೆದು ಪಾಳೆಯವನ್ನು ಹೊಕ್ಕು ಉರವಣೆ ನಡೆಸಿದರು. ಮಲಗಿದ ಹಾಸಿಗೆಗಳಲ್ಲಿ ಆಯುಧಗಳನ್ನು ಕಾಣದೆ ಕೆಲವು ಸೈನಿಕರು ಕತ್ತಲಲ್ಲಿ ಕಂಗೆಟ್ಟು ಬತ್ತಲೆ ಓಡಿದರು. ಅಂಧಕಾರದಲ್ಲಿ ಕೆಲವರು ಆಯುಧಗಳ ಮೇಲಣ ಒರೆಯನ್ನು ತಿರುವುತ್ತಾ; ಬಾಣಗಳು ಸಿಗದೆ ಅಂಬುಗಳಿಗೆ ಕೋಲು ಮುಡಿಗೆಗಳನ್ನು ಹೂಡಿ ಹೊಡೆಯುತ್ತಿದ್ದರು. ಹಿಂದುಮುಂದು ಕಾಣದೆ ಕುದುರೆಗಳ ಬಾಲಕ್ಕೆ ಕಡಿವಾಣವನ್ನು ಹಾಕಿದರು. ಸೈನಿಕರ

ಕಳವಳವು ವರ್ಣಿಸಲಸದಳವಾಯಿತು. ಕೆಲವರು ಶತ್ರು ಮಿತ್ರರೆಂಬುದನ್ನೂ ಕಾಣದೆ ತಮ್ಮ ತಮ್ಮೊಳಗೆ ಕಡಿದಾಡಿದರು. ಮತ್ತೆ ಕೆಲವರು ತಮ್ಮ ಒಡೆಯರನ್ನು ನಂಬದೆ ಓಡಿಹೋದರು. ಅಂಜುಬುರುಕ ದೊರೆಗಳು ಗುಡಾರಗಳನ್ನು ಬಿಟ್ಟೋಡಿದರು.

ನರಸಿಂಗರಾಯನು ಇದನ್ನು ಕೇಳಿ ಅರಮನೆಯಿಂದ ಹೊರಗೆಬಂದು ಸಿರುಮನ ಮಗ ಗಂಡುಗಲಿ ಕಾಚಯ್ಯನು ಕಗ್ಗೊಲೆ ಮಾಡುತ್ತಿರುವುದನ್ನು ಕೇಳಿದೊಡನೆ ಅವನ ಕುಡಿಮೀಸೆ ಕುಣಿದವು, ಕಡೆಗಣ್ಣು ಕೆಂಪೇರಿದವು. ಹುಬ್ಬುಗಂಟಿಕ್ಕಿ ಕಡುಕೋಪ ದಿಂದ ಘುಡಿಘುಡಿಸುತ್ತಾ ಹೊರಟು ಚಾವಡಿಗೆ ಬಂದನು. ಸಚಿವರನ್ನೂ, ಮಾಂಡಲಿಕ ದೊರೆಗಳನ್ನೂ ಕರೆಸಿ ಮಾತಾಡಿ ಕಾಲಾಳುಗಳನ್ನೂ ಕುದುರೆಗಳನ್ನೂ ಕಾಚನ ಸುಭಟರ ಮೇಲೆ ಓಡಿಸಿದನು. ನರಸಿಂಗರಾಯನ ಕಾಲಾಳುಗಳು ಕೈದೀವಿಗೆಗಳ ಬೆಳಕಿನಲ್ಲಿ ಕಾಚನ ಸುಭಟರನ್ನು ಮುತ್ತಿ ಬೊಬ್ಬಿರಿದರು, ಕಾಚನ ಸುಭಟರು ಕತ್ತಿಹಿಡಿದು ಪರಬಲವನ್ನು ತುಂಡರಿಸಿ ಕಡಿದರು. ಕಾಲತುಂ ಡ್ರಿಸಿ, ಕಣ್ಣೊಡೆದು. ಬೆನ್ನುನೆಗ್ಗಿ, ತೋಳುಹರಿದು, ತೊಡೆಮುರಿದು ಕೊಲ್ಲುತ್ತಾ ಬರಲು ಬಲುಗಾಯಗಳಿಂದ ಕಣ್ಣೀರು ಸುರಿಸುತ್ತಾ ಗುಂಡಿಗೆಯೊಡೆದು ರಾಯನ ಸೇನೆಯು ಓಡಿತು. ನರಸಿಂಗರಾಯನು ಹೇಡಿ ದೊರೆಗಳನ್ನೂ ಸೇನಾನಿಗಳನ್ನೂ ಜರೆದು ಮಾತಾಡಿದನು. ಕಾಚನ ಹೆಬ್ಬಲವು, ಮುಂದೆ ಸಾಗುತ್ತಾ ಗಿಡಗನು ಕಬ್ಬಕ್ಕಿ ಗಳನ್ನು ಮುತ್ತುವಂತೆ ರಾಯನ ಸೇನೆಯನ್ನು ಮುತ್ತಿ ಕೈಜೀತದ ಕುದುರೆ ನಾಯಕ ರುಗಳನ್ನು ಸದೆಬಡಿದು ಫವುಜುಗಳ ಮಧ್ಯದಲ್ಲಿ ಮಾಯಾಜಾಲವೆಂಬಂತೆ ಕಾಣಿಸಿಕೊ ಳ್ಳುತ್ತಾ ಕಡಿದಾಡಿತು. ಮರುಳು ಗಣಗಳು ಕಾಚನನ್ನು ಕೊಂಡಾಡಿದುವು. ಮುಂದು ವರಿಯುತ್ತಾ ಕಾಚನು ಬಾಗೂರು ಕೋಟೆಯ ಹೆಬ್ಬಾಗಿಲಿಗೆ ಬಂದು ಬಿರುದಿನ ಕಹಳೆ ಗಳನ್ನು ಹಿಡಿಸಿ ಆಳುವೇರಿಯನ್ನು ಅಡರುತ್ತಿರಲು ನಿದ್ರೆಮಾಡುತ್ತಿದ್ದ ಗೋವಿಂದನು ಜಯಕಹಳೆಯ ಧ್ವನಿಯನ್ನು ಕೇಳಿ ಎಚ್ಚತ್ತು ಹೆಬ್ಬಾಗಿಲ ಬಳಿಗೆ ಬಂದು ಪಂಜಿನ ಬೆಳಕಿನಲ್ಲಿ ಕಾಚಯ್ಯನನ್ನು ಗುರುತಿಸಿ ಹೆಬ್ಬಾಗಿಲನ್ನು ತೆಗೆಸಿದನು. ಕಾಚೇಂದ್ರನು ತಾನು ಹಿಡಿದುತಂದ ಕುದುರೆಗಳನ್ನೂ ಸೆರೆಯಾಳುಗಳನ್ನೂ ಗೋವಿಂದನಿಗೊಪ್ಪಿಸಿ ದೋಚಿಕೊಂಡು ಬಂದ ಬೊಕ್ಕಸವನ್ನೂ, ಕಡಿದುತಂದ ವೀರರ ತಲೆಗಳನ್ನೂ ಗೋವಿಂದ ಭೂಪಾಲನ ಮುಂದಿಟ್ಟು ಅವನ ಅಡಿಗಳಿಗೆ ನಮಸ್ಕರಿಸಿದನು.

೩

ಗಾಯಗೊಂಡ ಜನರನ್ನು ರಾಯನು ಕಂಡು ಕೋಪವನ್ನುತಾಳಿ ಸೇನಾನಾಯಕರನ್ನೂ ಮಾಂಡಲಿಕರನ್ನೂ ಮೂದಲಿಸಲು, ಅವರು ರಾಯನನ್ನು ಸಮಾಧಾನ ಮಾಡಿ ಇಂತೆಂದರು: "ಚಿತ್ತೈಸು ರಾಯ ! ಮೂದಲೆಯ ಮಾತುಗಳೇಕೆ? ಹೊತ್ತು ಮುಳುಗದ ಮುನ್ನ ಕಾಚನ ತಲೆಯನ್ನು ತಂದು ತಮ್ಮಮುಂದೆ ಆರತಿಮಾಡುವೆವು. ಅವನು ಮೋಸದಿಂದ ಕಗ್ಗೊಲೆಮಾಡಿದನು. ಕಾಚನ ತಲೆಯನ್ನು ತರದಿದ್ದರೆ ನಮ್ಮ ಮಿಾಸೆಯನ್ನು ಕೊಯಿಸು" ಎಂದು ಶಪಥಮಾಡಿದರು. ಅಪ್ಪಣೆ ಪಡೆದು ತಮ್ಮ ತಮ್ಮ ಕುದುರೆ ಮಂದಿ ಮಾರ್ಬಲ ಸಹಪಾಗಿ ಹೊರಟು ಬಾಗೂರು ಕೋಟೆಯನ್ನು ಮುತ್ತಿದರು. ಕೆಂಧೂಳು ನಭವನ್ನು ಮುತ್ತಿತು. ಕತ್ತಲೆಯಾಯಿತು. ಬೊಬ್ಬಿರಿಯುತ್ತಾ ಉರುವಣಿಸಿ ಕೋಟೆಗೆ ಲಗ್ಗೆ ಇಟ್ಟರು. ಕೋಟೆಗೆ ನಿಚ್ಚಣಿಕೆಗಳನ್ನು ಹಾಕಿ ಏರಿದರು. ಎದುರಾಳಿಗಳನ್ನು ಹಿಡಿದು ಮತ್ಸರದಿಂದ ಕಾದಾಡಿದರು. ಕೋಟೆಯ ರಕ್ಷಕರು ಹುರಿದ ಮಳಲನ್ನೂ ಕಾದ ಅಂಬಲಿಯನ್ನೂ ಸುರಿದರು. ಕೋಟೆ ಏರಿ ಬರುವವರ ತಲೆಗಳನ್ನು ಕಡಿದು ಅಗಳಿಗೆ ಉರುಳಿಸಿದರು. ಎಲ್ಲಿ ನೋಡಿದರೂ ಕಾಚನ ಸುಭಟರ ಉರವಣೆ; ಎಲ್ಲರಮೇಲೆಯೂ ಕಾಚನ ಸುಭಟರೆಸೆವ ಕಲ್ಲುಗಾಯಗಳು. ಕತ್ತಿಗಳ ಗಾಯ; ಬಲ್ಲೆಯದ ಗಾಯ. ಕೋಟೆಯ ಸುತ್ತ ಭೂಮಿಯು ಹೆಣಮಯವಾಯಿತು. ಮಡಿದ ಕಾಲಾಳುಗಳ ರಾಶಿಯನ್ನು ರಾಯನು ಕಂಡು ಕಡುಕೋಪದಿಂದ ಗರ್ಜಿಸುತ್ತಾ ಎತ್ತರದಲ್ಲಿ ನಿಂತು ರಾಜಕುಮಾರರನ್ನೂ ದೊರೆಗಳನ್ನೂ ಕಡುಗಲಿಗಳಾದ ಸುಭಟರನ್ನೂ ಕೈಬೀಸಿ ಕರೆದು ಯುದ್ಧಕ್ಕನುವಾದನು. ಕರಿಪಡೆ, ಕುದುರೆ, ಕಾಲಾಳ್ಗಳು ಬೊಬ್ಬೆಯಿಡುತ್ತಾ ಮುಂದೆ ನಡೆದರು. ಇದನ್ನು ಕಂಡು ಬಾಗೂರು ನಡುಗಿತು.

ಬಾಗೂರು ಪ್ರಜೆಗಳು ಗೋವಿಂದನನ್ನು ಸಂಧಿಸಿ ಕೈಮುಗಿದರು. ನಮ್ಮೆಲ್ಲರನ್ನು ರಕ್ಷಿಸುವುದೆಂದೂ ರಾಯನೊಡನೆ ಸಂಧಾನ ಮಾಡುವುದು ಒಳ್ಳೆಯದು; ಇಲ್ಲವಾದರೆ ಅವನು ಕಡುಕೋಪದಲ್ಲಿ ಕೋಟೆಯನ್ನು ಕೆಡಹಿ, ಊರನ್ನು ಕೊಂಡು ನಮ್ಮೆಲ್ಲರನ್ನೂ ನಾಶಮಾಡದೆ ಬಿಡುವುದಿಲ್ಲ. ಒಡಂಬಡಿಕೆಯನ್ನು ಮಾಡು; ಕೆಡಬೇಡ, ರಾಯನು ಕೇಳುವಷ್ಟು ಹೊನ್ನನ್ನು ಕೊಡು. ಪೊಡವೀಶನೊಡನೆ ಮತ್ಸರಬೇಡ. ಛಲದಿಂದ ರಾವಣನು ಹತ್ತು ತಲೆಯನ್ನು ನೀಗಾಡಿದನು. ಆದ್ದರಿಂದ ನೀನು ಛಲ ಮಾಡಿ ಕೆಡಬೇಡ ಎಂದು ಪರಿಪರಿಯಾಗಿ ಬೇಡಿದರು.

ಗೋವಿಂದನ ಮನಸ್ಸು ಕರಗಿತು. ಛಲದಿಂದ ನಾಶವೇ ಹೊರತು ಪ್ರಜೆಗಳ ರಕ್ಷಣೆಯಾಗದೆಂದು ಮನಗಂಡನು. ಸಂಧಾನವೇ ಸೂಕ್ತವೆಂದು ನಿರ್ಧರಿಸಿದನು. ಕೂಡಲೇ ಕೋಟೆಯ ಆಳುವೇರಿಯನ್ನು ಅಡರಿ ಶತ್ರುಪಾಳೆಯದಕಡೆ ಸುತ್ತನೋಡಲು

ಎಕ್ಕಟಿ ಗಂಗಯ್ಯನನ್ನು ಕಂಡನು. ಸಮೀಪಕ್ಕೆ ಬರುವಂತೆ ಕೈಬೀಸಿ ಕರೆದು "ನೀನು ನಮ್ಮೆಲ್ಲರಿಗೂ ಹಿರಿಯನು; ರಾಯನೊಡನೆ ನಮಗೆ ಮತ್ಸರವೇಕೆ; ರಾಯನ ಚರಣವನ್ನು ಕಾಣಿಸು" ಎಂದು ನುಡಿಯಲು ಗಂಗನಾಯಕನು ಕೂಡಲೇ ಆನೆಯೇರಿ ಬರುತ್ತಿದ್ದ ರಾಯನ ಬಳಿಗೆ ಹೋಗಿ ಗೋವಿಂದನ ಪ್ರಾರ್ಥನೆಯನ್ನು ಅರಿಕೆ ಮಾಡಿದನು. ರಾಯನು ಸಂತೋಷಿಸಿ "ಏಳುಲಕ್ಷ ಹೊನ್ನನ್ನು ಕಪ್ಪವಾಗಿ ಕೊಡಬೇಕು. ಕಾಚನನ್ನು ತಂದೊಪ್ಪಿಸಬೇಕು. ಇದಕ್ಕೆ ಒಡಂಬಡದಿದ್ದರೆ ಕೋಟೆಯನ್ನು ಅರೆನಿಮಿಷದಲ್ಲಿ ಸೂರೆಮಾಡುತ್ತೇನೆ" ಎಂದು ಗೋವಿಂದನಿಗೆ ತಿಳಿಸಬೇಕೆಂದು ಅಪ್ಪಣೆಮಾಡಿದನು. ಗೋವಿಂದನು ಏಳುಲಕ್ಷ ಹೊನ್ನುಗಳನ್ನು ಕೊಡಲೊಪ್ಪಿದನು; ಆದರೆ ನಂಬಿ ಬಂದ ಕಾಚನನ್ನು ಎಂದಿಗೂ ಬಿಟ್ಟುಕೊಡಲಾರೆ ಅವನನ್ನು ಹಿಂದಿರುಗಿ ಊರಿಗೆ ಕಳುಹಿಸುವೆನು. ಸಂಥವಿದ್ದರೆ ರಾಯನೇ ಅವನನ್ನು ಹಿಡಿಯಲಿ ಎಂಬ ಸೂಚನೆಗಳಿಗೆ ರಾಯನೂ ಒಡಂಬಟ್ಟನು. ಕಾಚನು ಊರಿಗೆ ಹೊರಟರೆ ಅವನನ್ನು ಬಿಡಲಾಗದು ಎಂಬ ರಾಯನ ಆಜ್ಞೆಯನ್ನು ಡಂಗುರ ಮೂಲಕ ಸೇನೆಯ ಮಧ್ಯದಲ್ಲಿ ಸಾರಲು ಸೇನಾಪತಿಗಳೂ, ದಂಡನಾಯಕರೂ, ಮಾಂಡಲಿಕರೂ ಕೋಟೆಯನ್ನು ಸುತ್ತುವರಿದು ಕಾಚನನ್ನು ಹಿಡಿಯಲು ಬಹಳ ಎಚ್ಚರದಿಂದ ಕಾಯುತ್ತಿದ್ದರು.

ಇತ್ತ ಗೋವಿಂದನು ಕಾಚಯ್ಯನನ್ನು ಹತ್ತಿರ ಕರೆದು ವಿಸ್ತಾರವಾಗಿ ಎಲ್ಲಾ ಸಂಗತಿಗಳನ್ನೂ ವಿವರಿಸಿದನು. ಕಾಚನು "ನೀನು ನಿನ್ನ ವಂಶಕ್ಕೆ ಅಪಕೀರ್ತಿಯನ್ನು ತಂದೆ. ಒಂದು ತಿಂಗಳಮಟ್ಟಿಗಾದರೂ ಯುದ್ಧವನ್ನು ಮಾಡಿಲ್ಲ. ಇದು ನಿನಗೆ ಸರಿಯಲ್ಲ. ಸಂಧಾನ ಮಾಡಬೇಡ" ಎಂದು ಬೇಡಿದನು. ಗೋವಿಂದನಿಗೆ ಇದು ಸರಿದೋರಲಿಲ್ಲ ನೀನು ಯುದ್ಧಕ್ಕಾಗಿ ನಮ್ಮ ಊರಿಗೆ ಬಂದವನಲ್ಲ. ಸೂಳೆಯ ಆಶೆಗಾಗಿ ಬಂದಿರುವೆ ಎಂಬ ಗೋವಿಂದನ ಬಿರುನುಡಿಗಳನ್ನು ಕೇಳಿ ಕಾಚನಿಗೆ ಕಡುಕೋಪ ಉಂಟಾಯಿತು. ಗೋವಿಂದನನ್ನು ಕೊಂದು ಬಾಗೂರನ್ನು ಮುತ್ತಿರುವ ರಾಜರುಗಳನ್ನು ಯಮನ ಬಾಯಿಗೆ ತುತ್ತುಕೊಡುವೆನು ಎಂದು ಘುಡಿಘುಡಿಸಿದನು. ಆದರೆ ತಂದೆ ಆಜ್ಞೆಯು ಜ್ಞಾಪಕಕ್ಕೆ ಬರಲು, ಅದರಂತೆ ಗೋವಿಂದನ ಅಪ್ಪಣೆ ಮೀರಬಾರದೆಂದು ನಿರ್ಧರಿಸಿದನು. ಗೋವಿಂದನು ಉಡುಗರೆ, ವೀಳೆಯವನ್ನು ಧುರಧೀರ ಕಾಚನಾಯಕನಿಗೆ ತರಿಸಿಕೊಟ್ಟು ಕಂಬನಿ ಸುರಿಸುತ್ತಾ ಎಚ್ಚರಿಕೆಯಿಂದ ಪ್ರಯಾಣಬಳಸೆಂದು ಬುದ್ಧಿವಾದವನ್ನು ಹೇಳಿ ಬೀಳ್ಕೊಟ್ಟನು.

ಕಾಚೇಂದ್ರನು ಗೋವಿಂದನಿಂದ ಬೀಳ್ಕೊಂಡು ಹೆಬ್ಬಾಗಿಲಿಗೆ ಬರುವ ವೇಳೆಗೆ ಸೂರ್ಯಾಸ್ತಮಾನವಾಗಲು ಕತ್ತಲು ಕವಿಯಲಾರಂಭಿಸಿತು. ಕಾಚನಾಯಕನು ತನ್ನ ರಾವುತರನ್ನು ಕಂಡು ನಿಮಗೆ ನಿನ್ನಿನ ಪ್ರಯಾಣದಿಂದ ಬಹಳ ಉಬ್ಬಸವಾಗಿದೆ. ಆದರೂ ಇಂದು ಪುನಃ ವೇಗವಾಗಿ ಹಿಂದಿರುಗಬೇಕಾಗಿದೆ. ನೀವು ಒಂದು ತೊಟ್ಟಲು

ನಾನು ಒಂದು ಮಗು. ನೀವು ನನ್ನನ್ನು ಬಿಟ್ಟು ಹೋಗಬೇಡಿ ಎಂದು ನುಡಿದನು. ಪರಿವಾರದವರು, "ದೊರೆರಾಯ! ಆಲೋಚನೆ ಮಾಡದಿರು. ನೀವು ನಮ್ಮನ್ನು ಇದುವರೆಗೂ ಸುಖದಿಂದ ಸಲಹಿ ಸಾಕಿರುವಿರಿ. ಇಂದು ಸ್ವರ್ಗದ ದೇವತೆಗಳೂ ಮೆಚ್ಚುವಂತೆ ನಮ್ಮ ಕೈತೋರಿ ಕಾಳಗಮಾಡುವೆವು. ಮಾರಿಬಂದರೆ ನಿಮ್ಮ ಋಣವನ್ನು ತೀರಿಸಿ ಸುರಾಂಗನೆಯರಿಂದ ಸೇವೆಗೊಳ್ಳಲು ಹೋಗುವೆವು"ಎಂದು ನುಡಿದರು. ಕೇಸರಿಯು ತನ್ನ ಹಿಂದಿನೊಡನೆ ಗವಿಯಿಂದ ಹೊರಡುವಂತೆ ನರಕೇಸರಿಯಾದ ಕಾಚೇಂದ್ರನು ತನ್ನ ವೀರಭಟರೊಡನೆ ಬಾಗೂರು ಮೂಡಣ ಬಾಗಿಲಿನಿಂದ ಹೊರಟನು. ಭಟರ ಬೊಬ್ಬೆಗಳೂ, ಬಿರುದಿನ ಕಹಳೆಗಳೂ ಮೊಳಗಿದವು. ನರಸಿಂಗರಾಯನ ಸೇನಾಪತಿಗಳು ಬಡಗ ಮತ್ತು ಪಡುವ ದಿಕ್ಕುಗಳ ಮುತ್ತಿಗೆಯನ್ನೆಬ್ಬಿಸಿ ಮೂಡಣ ದೆಸೆಗೆ ಕಾಚನನ್ನು ಹಿಡಿಯಲು ಹೊರಟರು. ಸಾಸಿರಾರು ಪಂಜುಗಳನ್ನು ಹಿಡಿದು ಕರಿ ತುರಗ ಕಾಲಾಳುಗಳು 'ಕಾಚ ಸಿಕ್ಕಿದ' ಎಂದು ಕೂಗುತ್ತಾ ಬೊಬ್ಬೆಇಡುತ್ತಾ ಹೊರಟರು. ಕಾಚನ ವೀರಭಟರಾದರೋ ಮುಂದೆ ಬಂದಡ್ಡಗಟ್ಟಿದ ವೀರಭಟರನ್ನೂ ಹಿಂಬಾಲಿಸುತ್ತಿದ್ದ ದೊರೆಗಳನ್ನೂ ಕೊಲ್ಲುತ್ತಾ, ಕೋಲಾಹಲದಿಂದ ಉರವಣಿಸುತ್ತಾ ಮುಂದುವರಿದರು. ಈ ಪಟುಭಟರ ಕಾಳಗದಲ್ಲಿ ಹೆಣಗಳು ಸಾಲಾಗಿ ಮಲಗಿದವು. ಬಿದ್ದ ಕುದುರೆಗಳನ್ನೂ, ಮಡಿದ ಕರಿಗಳನ್ನೂ, ಪಟು ಭಟರನ್ನೂ ಶಾಕಿನಿ ಢಾಕಿನಿಯರ ಗಡಣವೂ ತಿಂದು ತೇಗಿದವು. ಗಿಡಗನನ್ನು ಗಿಳಿಗಳ ಹಿಂಡೂ, ಸಿಂಹ ರಾಜನನ್ನು ಮರಿಯಾನೆಗಳ ತಂಡವೂ ತರುಬುವವೇ! ಕಾಚನ ಅಬ್ಬರಕ್ಕೆ ರಾಯನ ದಳವು ನಿಲ್ಲಲಾರದೆ ಹೋಯಿತು. ಈ ರೀತಿ ಶತ್ರು ಸೇನೆಯನ್ನು ಹಿಂದಕ್ಕೆ ಅಟ್ಟಿ ಗಾವುದ ದೂರ ನಡೆದು ಉದಯ ಕಾಲಕ್ಕೆ ವೇದಾವತಿಯನ್ನು ಸೇರಿದನು. ಪುಣ್ಯತೀರ್ಥದಿಂದ ಗಾಯಗಳನ್ನು ತೊಳೆದು ಪಟ್ಟಿಗಳನ್ನು ಕಟ್ಟಿಸಿದನು. ನೊಂದವರನ್ನು ಸಂತೈಸಿದನು. ವಿಜಯ ವಾರ್ತೆಯನ್ನು ತಿಳಿಸಲು ಮುಂದೋರ್ವನನ್ನು ಅಟ್ಟಿದನು. ಸಿರುಮನು ಹಿರಿದು ಹಿಗ್ಗಿ ಮಾರ್ಗದಲ್ಲಿಯೇ ಮಗನನ್ನು ಕಂಡು ಬಿಗಿದಪ್ಪಿದನು. ಪರಿವಾರದವರಿಗೆ ಉಡುಗೊರೆಗಳನ್ನಿತ್ತು ಮನ್ನಿಸಿದನು.

ಪೊಡವಿಪಾಲ ಸಿರುಮನು ಹಿರಿಯ ಚಾವಡಿಯಲ್ಲಿ ಸಭೆ ಮಾಡಿ ಶೌರ್ಯದಿಂದ ಕಾದಾಡಿದ ವೀರರಿಗೂ, ಹಿರಿಯ ಕುಮಾರ ಕಾಚೇಂದ್ರನಿಗೂ ಉಡುಗೊರೆಗಳನ್ನೂ, ಬಿರುದಾವಳಿಗಳನ್ನೂ ಕೊಟ್ಟು ಮನ್ನಿಸಿದನು. ಅನಂತರ ಯುವರಾಜ ಕಾಚೇಂದ್ರನು ತಂದೆಯಿಂದ ಅಪ್ಪಣೆ ಪಡೆದು ಹೊರಟ ಮೇಲೆ ರಾಯನ ದಳದೊಡನೆ ಕಗ್ಗಾಳಗ ಮಾಡಿ ಬಾಗೂರು ಕೋಟೆಯನ್ನು ಹೊಕ್ಕ ಸಂಗತಿಯನ್ನೂ, ತಾನು ಪರಿ ಪರಿಯಾಗಿ ಹೇಳಿದರೂ ಗೋವಿಂದನು ಲಾಲಿಸದೇ ಸಂಧಾನ ನಡೆಸಿ ಏಳು ಲಕ್ಷ ಹೊನ್ನುಗಳನ್ನಿತ್ತು ರಾಯನೊಡನೆ ಸೇರಿದ್ದನ್ನೂ, ಅನಂತರ ತಾನು ಕೋಟೆಯಿಂದ ಹೊರಟು ರಾಯನ

ಪಟು ಭಟರನ್ನು ಯಮಸದನಕ್ಕೆ ಕಳುಹಿಸಿ ಜಯಶೀಲನಾಗಿ ಬಂದ ಸಂಗತಿಯನ್ನೂ ವಿವರಿಸಿ ಹೇಳಿದನು. ಕುಮಾರ ಮಲ್ಲಯ್ಯನು ಈ ವಿವರಣೆಯನ್ನು ಕೇಳಿದೊಡನೆ ಅಣ್ಣನು ರಾಯನ ಸೇನೆಯ ಉಪಟಳಕ್ಕೆ ಹೆದರಿ ಹಿಮ್ಮೆಟ್ಟಿ ಬಂದನೆಂದು ಭಾವಿಸಿ ಕೋಪಗೊಂಡನು. "ಶತ್ರುಗಳೊಡನೆ ಕಾದಾಡಲು ಹಿಂಜರಿದು ಬಾಗೂರು ಕೋಟೆಯನ್ನು ಅವರಿಗೆ ಒಪ್ಪಿಸಿ ಬಂದೆಯೊ ! ಲೇಸು ಮಾತಾಡಿದೆ ಅಣ್ಣಾ ! ನಿನ್ನ ಧೀರತನವನ್ನು ಏನೆಂದು ವರ್ಣಿಸಲಿ ! ಕಲಿತನದಿಂದ ಕಾದಾಡಿ ಭೂರಿ ಸ್ವರ್ಗವನ್ನೇರುವುದನ್ನೂ ಬಿಟ್ಟು ಪ್ರಾಣದಾಸೆಯಿಂದ ಓಡಿ ಬಂದೆಯಾ!" ಎಂದು ಅವಹೇಳನ ಮಾಡಿದನು. ಅಣ್ಣನಿಗೆ ತಾಳ್ಮೆಯು ಮೀರಿತು. "ನಾಳೆ ಜನನಾಥ ನರಸಿಂಗರಾಯನ ಸೇನಾನಿಕರವು ಬಂದು ಈ ಕೋಟೆಯನ್ನು ಮುತ್ತುವುದು. ಆಗ ನಿನ್ನ ಘನ ಪೌರುಷವನ್ನು ನೋಡುವೆನು. ಕೆಲಬಲದ ಹಳ್ಳಿಯ ದಂಡನ್ನು ಹೆದರಿಸಿ ಮಲೆತಿರುವಂತೆ ಎಂದು ಭಾವಿಸಿದೆಯೋ ! ನೆಲ ಹೊರದಂತೆ ಬರುವ ರಾಯನ ದಂಡಿನೊಡನೆ ನಿನ್ನ ಬಲುಹನ್ನು ನೋಡುವೆನು ಎಂದು ಅಣ್ಣನು ಕನಲಿ ನುಡಿದನು. "ಹಿರಿಯಣ್ಣನು ತಂದೆಗೆ ಸಮಾನ ಎಂದು ಈ ಮಾತನ್ನು ತಾಳಿ ಕೊಂಡಿರುವೆನು. ಯುದ್ಧದಲ್ಲಿ ನನಗಿದಿರಾಗಿ ಬಾಳುವವರು ಯಾರು ! ಪರಬಲಭೀಮನೆಂಬುದನ್ನು ಕಾಣೆಯಾ !" ಎಂದು ತಮ್ಮನು ಮಾರುತ್ತರವಿತ್ತನು. ಬೆಲಗೂರು ಭೈರವನು ರಾಯನ ದಂಡನ್ನು ಕಲಕಿ ವೀರಭಟಾವಳಿಯನ್ನು ತಂದು ಹಿಂದಿರುಗಿ ಬಂದ ಒಲುಗಯ್ಯ ಕಾಚಯ್ಯನನ್ನು ಹಳಿದು ಪಂಥ ಮಾಡುವುದು ಕುಮಾರ ಮಲ್ಲಯ್ಯನಿಗೆ ಉಚಿತವಲ್ಲವೆಂದು ಹೇಳಿದನು. ಸರಿ ! ನಿನಗೆ ಕಾಚನಾಯಕ ; ಅವನಿಗೆ ನೀನು. ಒಬ್ಬರನ್ನೊಬ್ಬರು ಹೊಗಳುವಿರಿ ಎಂದು ಕುಮಾರ ಮಲ್ಲಯ್ಯನು ನುಡಿಯಲು ಭೈರವನಿಗೆ ರೇಗಿತು. ಓಲಗದಲ್ಲಿ ಈ ರೀತಿ ಗಲಭೆಯಾಗುತ್ತಿರಲು ಸಿರುಮೇಂದ್ರನು ಸಮಾಧಾನ ಹೇಳಿ ಓಲಗವನ್ನು ಪೂರೈಸಿ ಅರಮನೆಗೆ ತೆರಳಿದನು.

ಇತ್ತ ನರಸಿಂಗರಾಯನು ಓಲಗ ಮಾಡಿ ಧುರವನ್ನು ಜಯಿಸಿಹೋದ ಕಾಚಯ್ಯನ ಶೂರತನವನ್ನು ಮೆಚ್ಚಿ ಕೊಂಡಾಡಿದನು. ಆ ವೇಳೆಗೆ ಗೋವಿಂದನು ಓಲಗಕ್ಕೆ ಬಂದು ರಾಯನನ್ನು ದರ್ಶನ ಮಾಡಿ ಏಳು ಲಕ್ಷ ಹೊನ್ನನ್ನೊಪ್ಪಿಸಿ ಪ್ರಣತಿಗಳನ್ನು ಕಾಣಿಸಿದನು. ರಾಯನು ಗೋವಿಂದನನ್ನು ಮನ್ನಿಸಿ ಉಡುಗೊರೆಯನ್ನು ಕೊಟ್ಟು ಮನ್ನಿಸಿದನು.

ಚಂದ್ರನನ್ನು ಹಿಡಿದಿದ್ದ ರಾಹುವು ಬಿಡುವಂತೆ ಬಾ ಗೂ ರು ಮುತ್ತಿಗೆಯನ್ನು ಎಬ್ಬಿಸಿ ರಾಯನು ಬೂದಿಹಾಳು ಕೋಟೆಯನ್ನು ಹಿಡಿಯಬೇಕೆಂದು ಪ್ರಯಾಣ ಮಾಡಿ ವೇದಾವತೀ ತೀರದಲ್ಲಿ ಬೀಡುಬಿಟ್ಟನು. ಓಲಗ ಮಾಡಿ ಮಾಂಡಲಿಕರನ್ನೂ ದಳಪತಿಗಳನ್ನೂ ಕರೆಸಿ ಸಿರುಮನ ರಾಜಧಾನಿಯನ್ನು ತೆಗೆದುಕೊಳ್ಳುವ ಉಪಾಯವನ್ನು

ಆಲೋಚಿಸಿದನು. ಈ ಅಲ್ಪ ವಿಷಯಕ್ಕೆ ಚಿಂತೆಮಾಡುವುದನಾವಶ್ಯಕ. ಸಿರುಮನೇ ಕಾಳಗಕ್ಕೆ ಬಂದರೆ ಅವನನ್ನು ಹೊಡೆದು ಹಾಕಿ ಬೂದಿಹಾಳು ಕೋಟೆಯನ್ನು ಧೂಳು ಕೋಟೆಯನ್ನಾಗಿ ಮಾಡುವೆವು ಎಂದು ಹೇಳಿ ವೀಳೆಯವನ್ನು ಪಡೆದರು. ಅಂದಿನ ಇರುಳನ್ನು ವೇದಾವತೀ ತೀರದಲ್ಲಿಯೇ ಕಳೆದು ಮಾರನೇ ದಿನ ಬೂದಿಹಾಳು ಬಯಲಲ್ಲಿ ರಾಯನು ಬೀಡು ಬಿಟ್ಟನು.

ಇತ್ತ ಸಿರುಮೇಂದ್ರನು ಹಿರಿಯ ಚಾವಡಿಗೆ ಬಂದು ವೀರರನ್ನೂ ಪಟು ಭಟರನ್ನೂ ಕರೆಸಿದನು. ವೀರರಾದ ಕುಮಾರರು, ಅಳಿಯಂದಿರು, ಬೆಲಗೂರು ಭೈರವನೂ ಬಂದರು. ನಿಡುಗಟ್ಟದ ನಾಗರಾಜ, ಹೆಗ್ಗೆರೆಯ ಮಲ್ಲಯ್ಯ ಮುಂತಾದವರು ಬಂದೊದಗಿದರು. ಹೆಗಲು ಖಡ್ಗ, ಹೆಗಲು ಕೈದೀವಿಗೆ, ಜಗಜಂಪಿನ ಸತ್ತಿಗೆ ಮುಂತಾದ ಬಗೆ ಬಗೆಯ ಬಿರುದಾವಳಿಗಳ ವೀರರು ಬಂದು ನೆರೆದರು. ಜೋಡು, ಸಿಂಗಾಡಿ, ಖಂಡೆಯ, ಸಬಳ, ಸರಳು, ಹೊರೆ, ಸರ್ಪಾಯುಧ ಮುಂತಾದ ಆಯುಧಗಳನ್ನು ಹಿಡಿದು ಹಲವು ವೀರರು ಬಂದು ಸೇರಿದರು. ಹೆಸರಾದ ಹಲವು ಕುದುರೆ ರಾವುತರು ಬಂದೊದಗಿದರು. ಪಟ್ಟೆಯ ನಟ್ಟೆ, ಚಲ್ಲಣಾದಿಗಳನ್ನು ಸಿರುಮೇಂದ್ರನು ವೀರರನ್ನು ಕರೆಸಿಕೊಟ್ಟನು. ಕಸ್ತೂರಿ, ಪುನಗು, ಕುಂಕುಮ, ಗಂಧ ಮುಂತಾದ ಸುವಸ್ತು ಗಳನ್ನು ತರಿಸಿ ಬಿಳಿಯೆಲೆ ಸಹಿತವಾದ ವೀಳೆಯವನ್ನಿತ್ತು ಮನ್ನಿಸಿದನು.

ಧರಣಿ ಬಿರಿಯುವಂತೆ ಬಿರುದಿನ ಕಹಳೆಗಳು ಮೊಳಗುತ್ತಿರಲು ಮಲ್ಲಯ್ಯನು ವೀರರೊಡನೆ ಹೊರಟು ಮುಂಚೂಣಿ ಕಾಳಗವನ್ನಾರಂಭಿಸಿದನು. ಉಭಯ ದಳದ ವರೂ ಅಂಬಿನ ಮಳೆಗರದು ಕಾದಾಡಿದರು. ಎದೆ ಮೈಗಳ ಮೇಲೆ ಗಾಯಗಳಾದವು. ಕೈಕಾಲುಗಳು ಮುರಿದು ರಕ್ತದ ಕಾಲುವೆ ಹರಿಯಿತು. ಪಟು ಭಟರು ಜೀವದಾಸೆ ಯನ್ನು ತೊರೆದು ಕಾದಾಡಿದರು. ಸುರುಗಿ, ಖಂಡೆಯ, ಬಿಲ್ಲು ಬಾಣಗಳಿಂದ ಹೊಡೆ ದಾಡಲು ಉಭಯ ದಳದ ಕಾಲಾಳು ಉರುಳಿತು. ಕುದುರೆಯ ರಾವುತರು ಮುಂದು ವರಿಯುತ್ತಿರಲು ಕೆಂಧೂಳು ಆಕಾಶವನ್ನಡರಿತು. ಸಿರುಮನ ಚೂಣಿಯ ಸುಭಟರು ಎದುರಾಳಿಗಳನ್ನು ಹೊಡೆದು ಬಿಸಿ ಬಿಸಿ ರಕ್ತವನ್ನು ಹರಿಸಿದರು. ಕುಮಾರ ಮಲ್ಲಯ್ಯನು ಸಿಡಿಲಿನಂತೆ ಉರವಣೆಯಿಂದ ತುರಗ, ಕಾಲಾಳು, ರಾವುತರನ್ನು ಯಮನಾಲಯಕ್ಕೆ ಕಳುಹಿಸಿದನು. ವೀರಭದ್ರ, ಬೆಲಗೂರು ಭೈರವ, ಧೀರ ಕಾಚ ನಾಯಕ, ನಾಗರಾಜ ಮೊದಲಾದವರು ಕುದುರೆಗಳನ್ನು ಕುಣಿಸುತ್ತಾ ಮಲ್ಲಯ್ಯನಿಗೆ ಪಿಡಿ ಬಲವಾಗಿ ಬಂದು ವೈರಿಗಳ ಶಿರಗಳನ್ನು ಕತ್ತರಿಸಿ ಬಿಸುಟದರು. ರಕ್ತದ ಹೊನಲು ಹರಿಯಿತು. ರಣವು ಹೆಣಮಯವಾಯಿತು. ಕಾಳಗವನ್ನು ನೋಡುತ್ತಿದ್ದ ನರಸಿಂಗರಾಯ ನಿಗೆ ಕುಮಾರ ಮಲ್ಲಯ್ಯನ ಸಾಹಸವನ್ನು ತೋರಿಸುತ್ತಿದ್ದರು. ಮಲ್ಲನಿದಿರಿನಲ್ಲಿ ಯಾರೂ ನಿಲ್ಲದಂತಾಯಿತು. ರಣಚವುಪಟ ಮಲ್ಲನೆಂದು ನೋಟಕರು ಕೊಂಡಾಡಿದರು.

೩

ಸಿರುಮ ಭೂಪಾಲನ ರಾಣಿ ಚಿಕ್ಕಮ್ಮನು ಮೇಲುಪ್ಪರಿಗೆಯನ್ನು ಹತ್ತಿ ಎಂಟು ದಿಕ್ಕುಗಳನ್ನು ನೋಡುತ್ತಾ ಸುತ್ತಲೂ ಬೀಡು ಬಿಟ್ಟಿರುವ ಮನ್ನೆಯರನ್ನು ನೋಡಿದಳು. ಇಂದಿನ ಕಾಳಗವು ನನಗಿರಲಿ ಮುಂದೆ ಏನು ಬಂದರೂ ಸಿರುಮನೃಪಾಲನೇನೋಡಿಕೊಳ್ಳಲಿ ಎಂದು ಸೋಮೇಶನೇ ಗತಿ ಎನ್ನುತ್ತಾ ಉಪ್ಪರಿಗೆಯನ್ನು ಇಳಿದು ಚಾವಡಿಗೆ ಬಂದು ಪುರದ ಹೆಂಗಳೆಯರನ್ನು ಕರೆಸಿದಳು. ಪರಿ ಪರಿಯ ವಿಷದ ಕಜ್ಜಾಯವನ್ನು ಮಾಡಿಸಿ ರಾಯನ ದಂಡಿಗೆ ಉಣ ಬಡಿಸುವೆನು ಎಂದು ಆಲೋಚನೆ ಮಾಡಿದಳು. ಸ್ತ್ರೀ ಸಂಕುಲವು ಅದನ್ನು ಒಪ್ಪಿತು. ಹಪ್ಪಳ, ಸಂಡಿಗೆ, ಬಾಳಕ, ಕಡಬು, ಕಜ್ಜಾಯಗಳನ್ನು ಮಾಡಿಸಿ ಹೆಡಿಗೆಗಳಲ್ಲಿ ತುಂಬಿಸಿದಳು. ಹಣ್ಣು-ಕಾಯಿಗಳನ್ನೂ ಮಂಗಳ ದ್ರವ್ಯಗಳನ್ನೂ ಬಣ್ಣ ಬಣ್ಣದ ತಟ್ಟೆಗಳಲ್ಲಿಟ್ಟರು.

ಶಶಿಮುಖಿಯರು ಹೆಡಿಗೆಗಳನ್ನೂ ತಟ್ಟೆಗಳನ್ನೂ ಹೊತ್ತರು. ಮಂಗಳ ಗೀತೆಯನ್ನು ಹಾಡುತ್ತಾ ಪಂಚ ವಾದ್ಯಗಳೊಡನೆ ಮುಂದೆ ನಡೆದರು. ರಾಣಿಯು ಮಡಿ ಬಟ್ಟೆಗಳ ಮೇಲೆ ನಡೆಮುಡಿ ಇಡುತ್ತಾ ಸೋಮೇಶನಾಲಯವನ್ನು ಸೇರಿದಳು. ಆಳು ಕುದುರೆ ಮಂದಿಯನ್ನು ಅಗಳಿನಲ್ಲಿ ನಿಲ್ಲಿಸಿ ರಾಯನ ಬಲವನ್ನೆಲ್ಲಾ ಕೋಲಾಹಲದಿಂದ ಕೊಲ್ಲುವೆನು ಎನ್ನುತ್ತಾ ಪಡುವಣ ದಿಡ್ಡಿಯಿಂದ ಹೊರಟಳು. ಸಕಲ ಸಂಭ್ರಮದಿಂದ ದೇವಕೆರೆಗೆ ಚಿಕ್ಕಮ್ಮನು ಬಂದು ಸೇರಿದಳು. ಸಾಹಸದಿಂದ ದೇವಿ ದೇವನೆಂಬ ಗುಡಿಯನ್ನು ರಚಿಸಿ ಬೇಗವಾಗಿ ಅಲಂಕರಿಸಿ, ಆರಾಧಿಸುತ್ತಾ ದೇವರಿಗೆ ಎಡೆ ಮಾಡುವಂತೆ ಸಡಗರದಿಂದಿರುತ್ತಿದ್ದಳು. ರಾಯನ ಪಾಳೆಯದವರು ಈ ಸ್ತ್ರೀ ಸಮೂಹವನ್ನು ಕಂಡು ಸಿರುಮನ ರಾಣೀವಾಸದವರೆಂಬ ಸಂಗತಿಯನ್ನು ತಿಳಿದವರಾದರು. ರಾಣೀವಾಸದವರನ್ನು ಸೆರೆಹಿಡಿವರೆ ಸಿರುಮನು ಸುಲಭವಾಗಿ ಸಾಧ್ಯವಾಗುವನ್ನು ಎಂದು ಭಾವಿಸಿ ಅವರನ್ನು ಮುತ್ತಲು ಒಂದು ಸೇನೆಯು ಹೊರಟು ಬಂದಿತು. ಇದನ್ನೇ ಹೊಂಚುತ್ತಿದ್ದ ಚಿಕ್ಕಮ್ಮ ರಾಣಿಯು ವಿಷಮಿಶ್ರವಾದ ಕಡುಬು ಕಜ್ಜಾಯಗಳನ್ನು ದೇವರ ಬಳಿಯಲ್ಲಿ ಬಿಟ್ಟು ಬೇಗವಾಗಿ ತನ್ನ ಪರಿವಾರದವರೊಡನೆ ಹೊರಟು ಮರೆಯಲ್ಲಿ ಅಡಗಿಕೊಂಡಳು. ವಸುಧೀಶ ನರಸಿಂಗರಾಯನ ಸೈನಿಕರು ಬಿಸಿಬಿಸಿ ಕಜ್ಜಾಯವನ್ನು ಕಂಡು ಸಂತೋಷದಿಂದ ಬೇಗಬೇಗವಾಗಿ ತಿಂದು ತೇಗಿದರು. ವಿಷವೇರಿ ಅಲ್ಲಿಯೇ ಎಲ್ಲರೂ ಮಲಗಿದರು. ಚಿಕ್ಕಮ್ಮನು ಒಕ್ಕಲು ಮಕ್ಕಳನ್ನು ಕರೆಸಿ ಕುಡುಗೋಲುಗಳಿಂದ ಸೈನಿಕರ ತಲೆಗಳನ್ನು ಕೊಯಿಸಿ ಬಣವೆ ಒಟ್ಟಿಸಿದಳು. ಊರಿಗೆಬಂದು ಸಿರುಮೇಂದ್ರನಿಗೆ ನಿಜಸಂಗತಿಯನ್ನು ಅರುಹಲು, ಉರ್ವರೂ ಸ್ಥಳಕ್ಕೆ ಹೋಗಿ ಹೆಣದ ರಾಸಿಯನ್ನು ಕಂಡರು. ಸಿರುಮನು ಮನಸ್ಸಿನಲ್ಲಿಯೇ ರಾಣಿಯ ಸಾಹಸಕ್ಕೆಮೆಚ್ಚಿ ಸಂತೋಷಿಸಿದನು. ಹೆಣದರಾಶಿಗೆ ಬೆಂಕಿ ಇಟ್ಟು ಸುಡಿಸಿದಳು. ಈ ಸುದ್ದಿಯನ್ನು ನರಸಿಂಗರಾಯನು ಕೇಳಿ ಕೋಪಗೊಂಡು ಬೂದಿಹಾಳಿನ ಪ್ರಜೆಗಳನ್ನು ಕೊಲ್ಲುತ್ತೇನೆ ಎಂದು ನುಡಿದನು.

## ೭

ಒಂದು ದಿನ ರಾಜಕುಮಾರರಾದ ಕಾಚಯ್ಯ, ಮಲ್ಲಯ್ಯ ಮತ್ತು ಅಳಿಯಂದಿರು ಚಾವಡಿಯಲ್ಲಿ ಸೇರಿ ಅಂದಿನಿರುಳು ಕಗ್ಗೊಲೆ ಬೀಳಬೇಕೆಂದು ಆಲೋಚನೆ ಮಾಡಿ ನಿರ್ಧರಿಸಿದರು. ಸಿರುಮನೃಪಾಲನು ಕಗ್ಗೊಲೆಗೆ ಹೆಸರಾದ ವೀರರನ್ನು ಕರೆಸಿದನು. ಭಂಡಾರಿ ಬಸವ. ಭೈರವ, ಎಣ್ಣೆಗೆರೆಯ ಗಿರಿತಿಮ್ಮ, ಹೊನ್ನುವಳ್ಳಿಯ ವೀರಭದ್ರ, ಉಪ್ಪಿನ ಹಳ್ಳಿಯ ಬೋರ. ಮಳಲಿಯ ಕೆಂಪನಾಯಕ, ಗದ್ವಾಲದ ಓಬನಾಯಕ, ಮತ್ತೋಡುಗಿಡ್ಡಗಿರಿಯ. ಉಪ್ಪಾಲಿಕರಹೊನ್ನಕಳಸ, ಅಸಂದಿಯಮಲ್ಲ. ಗೋಸಿಕೆರೆಯ ವೀರಗೊಲ್ಲ. ಮರಿವುಲ್ಲೆರಾಜ ಮುಂತಾದ ವೀರರು ಮುಂದೆ ಬಂದರು. ಇವರಿಗೆಲ್ಲಾ ಸಿರುಮನು ಕರ್ಪೂರವೀಳೆಯವನ್ನಿತ್ತು ಉತ್ತಮವಾದ ಕುದುರೆಗಳನ್ನು ತರಸಿಕೊಟ್ಟನು. ಕುಮಾರ ಮಲ್ಲಯ್ಯನು 'ಮರಿಸಿಂಹ,' ಕಾಚಯ್ಯನು 'ದುಷ್ಟರ ಅಂಕುಶ' ಎಂಬ ಹೆಸರಾದ ಕುದುರೆಗಳನ್ನು ಏರಿ ನಡೆದರು. ಭೈರವ, ಅಳಿಯ ತಿಪ್ಪಯ್ಯ ಸಹ ಉತ್ತಮಾಶ್ವಗಳನ್ನು ಏರಿದ್ದರು. ಸಿರುಮನು ಕಾಲೋಚಿತವಾದ ಬುದ್ಧಿಯನ್ನು ಹೇಳಿ ಬಡಗಣ ಚೋರದಿಡ್ಡಿಯ ಬಾಗಿಲಿನಿಂದ ಘುಡಿ ಘುಡಿಸುವ ಸಿಂಹಗಳಂತೆ ಹೊರಪ್ರಯಾಣ ಮಾಡಿಸಿದನು. ಮರಗಳ ಮರೆಯಲ್ಲಿ ಹೊಂಚುತಿದ್ದ ರಾಯನ ಭಟರನ್ನು ಸಿರುಮನಭಟರು ಹುಡುಕಿ ಕೈಕಾಲ್ಗಳನ್ನು ಕತ್ತರಿಸಿ ಶಿರಗಳನ್ನ ಕತ್ತರಿಸಿದರು. ಇವರ ಉರುಬೆಗೆ ರಾಯನ ದಂಡು ಹೆದರಿ ಚೆಲ್ಲಿ ಓಡಿತು. ವೇನರಾಜ ಕೇಶವರಾಜ ಕಸವನಾಯಕ, ಚೆನ್ನಮರಾಜ, ಚಿಟ್ಟೆಮರಾಜ ಮುಂತಾದ ಮನ್ನೆಯರು ಹೆದರಿ ದಿಕ್ಕುದಿಕ್ಕಿಗೆ ಓಡಿದರು. ಎಕ್ಕಟಿ ಗಂಗಯ್ಯನು ನಿಂತಲ್ಲಿ ನಿಲ್ಲದೆ ಓಡಿದನು. ಸಿರುಮನ ಮಕ್ಕಳ ಆರ್ಭಟವು ಕಗ್ಗೊಲೆಯ ಹೊಸಪರಿಯಾಯಿತು. ಕುಮಾರ ಮಲ್ಲಯ್ಯನ ಹೊಡೆತದಿಂದ ರಾಯನ ಪಾಳೆಯವು ತಲ್ಲಣಿಸಿತು. ನರಸಿಂಗರಾಯನು ಘುಡಿಘುಡಿಸುತ್ತಾ ಬಲವಾದ ಸೇನೆಯನ್ನು ತೆಗೆದುಕೊಂಡು ಕುದುರೆ ಏರಿ ಸಿರುಮನ ಮಕ್ಕಳನ್ನು ಬಿಡದಿರಿ. ಹೊಡೆಯಿರಿ ಎನ್ನುತ್ತಾ ಮುಂದೆ ಹೊರಟನು. ಸಿರುಮನ ಸೇನೆಯನ್ನು ಅಡ್ಡಗಟ್ಟಲು ಕುಮಾರ ಮಲ್ಲಯ್ಯನು ಗಿಡಗನು ಗಿಣಿಗಳ ಗುಂಪಿನ ಮೇಲೆ ನುಗ್ಗುನಂತೆ ರಾಯನದಂಡಿನ ಮೇಲೆ ಎರಗಿ ರಾಯನ ಕುದುರೆಗಳನ್ನು ಕಡಿದು ಕರಿಘಟೆಗಳನ್ನು ಅಡಗುಗೊಳಿಸಿ ಪಟುಭಟರ ಪಡೆಯನ್ನು ಹಿಂದಿರುಗಿಸಿದನು. ಕುಮಾರ ಮಲ್ಲಯ್ಯನಿಗೆ ಜಯಲಕ್ಷ್ಮಿಯು ಮಾಲೆಯನ್ನು ಹಾಕಲು ಧರ್ಮ ಕಹಳೆಯನ್ನು ಹಿಡಿಸಿಕೊಂಡು ತನ್ನ ಭಟರೊಡನೆ ಹೆಬ್ಬಾಗಿಲಿಗೆ ಹಿಂತಿರುಗಿ ಬಂದನು. ಕಂದನ ಹುಯ್ಯಲು ಕೇಳುತ್ತಾ ಸಿರುಮನು ಹೆಬ್ಬಾಗಿಲಿಗೆ ಬಂದು ಮಗನನ್ನು ಅಪ್ಪಿ ಸಂತೋಷಹೊಂದಿದನು. ಕುಮಾರನು ಕೋಳುಹಿಡಿದ ಕುದುರೆಗಳನ್ನೂ, ಕಾಲಾಳನ್ನೂ, ಜಲ್ಲೆಯ ಬೊಕ್ಕಸವನ್ನೂ ತಂದೆಗೊಪ್ಪಿಸಿ ಅಡಿಗಳಿಗೆರಗಿದನು. ಎಲ್ಲರೂ ಸಂತೋಷದಿಂದ ತಮ್ಮ ತಮ್ಮ ಅರಮನೆಗೆ ತೆರಳಿದರು.

ಲ

## ರಾಯನು ಕೋಟೆಯ ಶೃಂಗಾರ ನೋಡಿದನು.

ಮೂಡಲಲ್ಲಿ ತರಣಿ ಮೂಡಲು ಕಮಲಗಳು ಅರಳಿದವು; ತುಂಬಿ ಝೇಂಕರಿಸಿದವು; ಕುಮುದಗಳು ಮುಗುಳಂತೆ ಮುಚ್ಚಿದವು; ಉದಯವಾಗದ ಮುನ್ನವೇ ರಾಯನು ಎದ್ದು ನಿತ್ಯ ನಿಯಮಗಳನ್ನು ಆಚರಿಸಿದನು. ಶ್ರೇಷ್ಠವಾದ ಬೂದಿಹಾಳಿನ ಕೋಟೆಯನ್ನು ನೋಡಬೇಕೆಂದು ರಾಜೇಂದ್ರ ನರಸಿಂಗರಾಯನು ಆಡಂಬರದಿಂದ ಹೊರಟು ಬಂದು ಪೊಡವಿಯಲ್ಲಿ ಉನ್ನತವಾದ ಪಟ್ಟಣವನ್ನು ಕಂಡನು ನರಸಿಂಗರಾಯನು ಕೋಟೆಯ ಶೃಂಗಾರವನ್ನು ನೋಡಬೇಕೆಂದೂ, ಸ್ವಲ್ಪಕಾಲ ಯುದ್ಧವನ್ನು ನಿಲ್ಲಿಸಬೇಕೆಂದೂ ಸಿರುಮನಿಗೆ ಚಾರರಮೂಲಕ ಹೇಳಿಕಳುಹಿಸಿದನು. ಸಿರುಮನು ಸಂತೋಷಗೊಂಡು ತನ್ನ ಕುಮಾರನಿಗೆ ತಿಳಿಸಿ ಕಾಳಗವನ್ನು ನಿಲ್ಲಿಸಿದನು. ರಾಜೇಂದ್ರನು ಕೋಟೆಯ ಒಳಗೆ ಬಂದು ಸೋಮೇಶನ ದರ್ಶನ ಪಡೆದು ವಂದಿಸಿ ಹೋಗುವಂತೆ ಉತ್ತರವನ್ನು ಕಳುಹಿಸಿದನು. ಸಿರುಮನ ಬೀಗನಾದ ರುದ್ರರಾಜನು ಕೊತ್ತಳ ಕೊತ್ತಳವೊಳಗೆ ವಿಕ್ರಮಶೂರರಾಗಿ ಆಯುಧಗಳನ್ನು ಹಿಡಿದು ನಿಂತಿರುವ ವೀರರ ವೃತ್ತಾಂತವನ್ನು ವಿವರಿಸಿದನು. ಥಳಥಳಿಸುವ ಛತ್ರಿಯ ನೆರಳಲ್ಲಿ ಥಳಥಳಿಸುವ ಖಂಡೆಯವನ್ನುಹಿಡಿದವನು ಸಿರುಮನ ಅಳಿಯನು. ಖಡ್ಗಕಾಲ ಖಂಡೆಯುಗಳಿಂದೊಪ್ಪಿ ಪಡೆಯ ಮಧ್ಯದಲ್ಲಿ ಫೌಡಿಘುಡಿಸುವ ಬಡಬಾಗ್ನಿಯಂತೆ ನಿಂತಿರುವವನು ನಿಡುಗಟ್ಟದ ನಾಗರಾಜನು; ಪೆಗಲಲ್ಲಿ ಖಂಡೆಯವನ್ನು ಧರಿಸಿ ಜಗಝಂಪಿನ ಸತ್ತಿಗೆಯನ್ನು ಹಿಡಿಸಿಕೊಂಡು ನಿಂತಿರುವವನು ಸಿರುಮನ ಮಗಳ ಗಂಡನಾದ ಬಸವಯ್ಯನು. ಕನಕದಂಡದ ಸತ್ತಿಗೆಯನ್ನೂ ಹನುಮ ಧ್ವಜವನ್ನೂ ಹಿಡಿಸಿಕೊಂಡು ನಿಂತಿರುವವನು ಸಿರುಮನ ಅನುಜನಾದ ಹೆಗ್ಗೆರೆಯ ಮಲ್ಲಯ್ಯನು; ಬೀಸುತ್ತಿರುವ ಉಭಯ ಚಾಮರಗಳನ್ನು ಹಿಡಿಸಿಕೊಂಡ, ನೀಲಮಣಿಯ ಸತ್ತಿಗೆಯ ನೆಳಲಲ್ಲಿ ನಿಂತಿರುವವನು ಸಿರುಮನ ಮಗನಾದ ವೀರಭದ್ರನು. ಅವನು ರೂಪಿನೊಳಗೆ ಕಾಮ, ಕೋಪದಲ್ಲಿ ಯಮ. ಚಾಪಧರಿಸುವವರಲ್ಲಿ ಅರ್ಜುನ ಎಂದು ಭಟರು ಇವನನ್ನು ಹೊಗಳುವರು. ಇವನು ಯಾವ ದೊರೆಗಳನ್ನೂ ಲೆಕ್ಕಿಸದ ವೀರ; ಕೈಯ್ಯಲ್ಲಿ ಖಂಡೆಯವನ್ನು ತಿರುಗಿಸುತ್ತಾ ಯುದ್ಧಕ್ಕೆ ಸಿದ್ಧನಾಗಿ ನಿಂತಿರುವವನು ನಂಬಿಯಣ್ಣನು. ಸಿಡಿಲಿನ ಧ್ವನಿಯಂತೆ ಶಬ್ದಮಾಡುತ್ತಿರುವ ಢಾಗಟೆಗಳ ಮಧ್ಯದಲ್ಲಿ ನಿಂತಿರುವವನು ಸಿರುಮನ ಮಡದಿಯ ಅನುಜ ಬಸವೇಂದ್ರನು; ಬಿಳಿಯ ಕೊಡೆಯನ್ನು ಹಿಡಿಸಿಕೊಂಡು ನಿಂತಿರುವವನೇ ಬೆಲಗೂರು ಬೈರನಾಯಕನು; ಈಚಿನ ಕೊತ್ತಳದಲ್ಲಿ ಸಿಡಿಲಿನುರುವಣೆಯಿಂದ ನಿಂತಿರುವವನು ಕುಮಾರ ಮಲ್ಲಯ್ಯನು; ಇವನಿಗೆ ಎಡಬಲದಲ್ಲಿ ಕನಕ ಚಾಮರಗಳನ್ನು ಹಿಡಿದಿರುವರು ಸುತ್ತಲೂ ಭಟರು ನಿಂತಿರುವರು. ಇವನು

ವಿಖ್ಯಾತ ವೀರಕುಮಾರನು; ಎರಡು ಛತ್ರಿಗಳ ನೆಳಲಲ್ಲಿ ಚಿನ್ನದ ಬೊಂಬೆಯಂತೆ ರಾಜಿಸುತ್ತಾ ನಿಂತಿರುವವನು ಮನ್ಮಥರೂಪ ಧೀರನಾಯಕ; ಇವನು ಸಿರುಮನ ಮೋಹದ ಕುವರ; ಇವನನ್ನು ನಂಬಿ ಸಿರುಮನು ಈರೀತಿ ಕಾದುತ್ತಿರುವನು. ಯುದ್ಧದಲ್ಲಿ ಇವನನ್ನು ಎದುರಿಸಿ ನಿಲ್ಲುವವರನ್ನು ಕಾಣೆನು. ಬಿಳಿಯ ಚಾಮರ ಬಿಳಿಯ ಛತ್ರಿಗಳನ್ನು ಹಿಡಿಸಿಕೊಂಡು ನಿಂತಿರುವವನು ತಳವಾರ ತಿಪ್ಪಯ್ಯನು. ಕಡೆಯ ಕೊತ್ತಳದಲ್ಲಿ ನಿಂತಿರುವ ಕಾಚನಾಯಕನನ್ನು ತೋರಿಸಲು ಭೂವಲ್ಲಭ ನರ ಸಿಂಗರಾಯನು ಬಾಗೂರು ಕಗ್ಗೊಲೆಯಲ್ಲಿ ದೊರೆಗಳನ್ನು ಚೆಲ್ಲಿ ಬಡಿದು ಕೆದರಿದ ಧೀರ ನಿವನೆಂದು ತಲೆದೂಗಿದನು. ಗರುಡಧ್ವಜವನ್ನು ಹಿಡಿಸಿಕೊಂಡು ನಿಂತಿರುವವನು ಸೋಮಯ್ಯನು; ಕೋಟೆಯನ್ನು ಸರಿಮಾಡಿಸುತ್ತಲೂ ಶೃಂಗಾರ ಮಾಡಿಸುತ್ತಲೂ ಇರುವವನು ಅಧಿಕಾರಿ ಲಿಂಗಯ್ಯನು; ಸಿರುಮನಿಗೆ ಇವರು ಹಿತರು. ಚಿನ್ನದ ಕಳ ಸದ ಸತ್ತಿಗೆಯನ್ನು ಹಿಡಿಸಿಕೊಂಡಿರುವವನು ಸಿರುಮನ ತಮ್ಮ ಮಲ್ಲನಾಯಕನ ಮಗ ನಾದ ಚನ್ನಣ್ಣನು; ಪಲ್ಲವ ಸತ್ತಿಗೆಗಳನ್ನು ಹಿಡಿಸಿಕೊಂಡು ನಿಂತಿರುವವನು ಸಿರುಮನ ಮಂತ್ರಿ ಕಲ್ಲರಸಯ್ಯನು. ಕೊಡಗಿನ ಸತ್ತಿಗೆಗಳನ್ನು ಹಿಡಿಸಿಕೊಂಡು ವಿದ್ವಾಂಸರುಗಳ ಮಧ್ಯದಲ್ಲಿ ನಿಂತಿರುವವನೇ ನಡುನಾಡಗೂಳಿ ಸಿರುಮೇಂದ್ರನು. ಪಂಥವನ್ನುಮಾಡಿ ಹುಯ್ಯಲಕಂಡೋಡುವ ಹೇಡಿ ನೃಪರ ಗಂಡನಿವನು. ಇವನನ್ನು ನಾಡಾಡಿ ಎಂದು ತಿಳಿಯದಿರು. ಇವನ ಪರಾಕ್ರಮಕ್ಕೆ ಸರಿಯಾದವರು ಯಾರೂ ಇಲ್ಲ. ಎಂದು ರುದ್ರ ರಾಯನು ವಿವರಿಸಿದ ವೃತ್ತಾಂತವನ್ನೆಲ್ಲಾ ಕೇಳಿ ಸಿರುಮನ ಸುಭಟರ ಉರುವಣೆ, ಇವನ ಮಕ್ಕಳ ವೀರದೇಳ್ಗೆ, ಈ ಕೋಟೆಯ ಶೃಂಗಾರ ಬಹಳ ಚನ್ನಾಗಿದೆ. ಲೇಸು! ಲೇಸು! ಎಂದು ನರಸಿಂಗರಾಯನು ಹೊಗಳಿದನು.

ಈ ಸುಂದರವಾದ ಕೋಟೆಯನ್ನು ಹಾಳುಮಾಡದೆ ಸಿರುಮನೊಡನೆ ಒಡಂ ಬಡಿಕೆಮಾಡಿಕೊಳ್ಳುವುದು ಒಳ್ಳೆಯದು ಎಂದು ಸಂಧಾನಕ್ಕಾಗಿ ರಾಯನು ರುದ್ರರಾಯ ನನ್ನು ಕಳುಹಿಸಿದನು. ರುದ್ರರಾಯನು ಸಿರುಮನನ್ನು ಕಂಡು ಪರಿಪರಿಯಾಗಿ ಸಮಾ ಧಾನ ಹೇಳಿದನು. ಪೃಥವಿಗೊಡೆಯನಾದ ನರಸಿಂಗನೊಡನೆ ಕಾದಾಡಬೇಡ. ಕದನ ದಿಂದ ಕೇಡುತಪ್ಪದು. ಇನ್ನಾದರೂ ಅವನೊಡನೆ ಸಂಧಾನಮಾಡು. ವೀರರಾದ ಮಕ್ಕ ಳನ್ನು ಕಳೆದುಕೊಳ್ಳಬೇಡ; ಕಾಣಿಕೆಯನ್ನು ಕೊಟ್ಟು ಸಂಧಾನಮಾಡುವುದೇ ಲೇಸು ಮಾರ್ಗ ಎಂದು ಹೇಳಲು ಸಿರುಮನು ನಕ್ಕು "ಎಂದಿಗೂ ಸಂಧಾನದ ಮಾತನ್ನಾಡಲಾ ರೆನು. ತೋಳಬಲುಹನ್ನು ಕಾಳಗದಲ್ಲಿಯೇ ತೋರಿಸುವೆನು." ಎಂದು ನುಡಿದನು. ಹಿಂದೆ ಕೌರವನಿಗೆ ಬುದ್ಧಿಯನ್ನು ಹೇಳಲು ನಿನ್ನಂತೆ ಅವನೂ ಲಾಲಿಸಲಿಲ್ಲ. ಆದ್ದರಿಂ ದಲೇ ಭಾರತ ಯುದ್ಧದಲ್ಲಿ ಎಲ್ಲರೂ ಮಡಿದರು. ಇದನ್ನು ನಿನಗೆ ಹೇಳಬೇಕೆ? ಸಾಗ ರದ ಮಧ್ಯದಲ್ಲಿ ಸುಖವಾಗಿರುವೆನೆಂದು ನಂಬಿದ ರಾವಣನನ್ನು ರಘುನಾಥನು ಮುತ್ತಿ

ಲ್ಲವೇ! ರಾವಣನ ಸತ್ವವು ಕಮ್ಮಿಯಾಗಿತ್ತೇ! ಎಂದು ಹೇಳಲು ಸಿರುಮನಿಂತೆಂದನು. "ಭಾವಯ್ಯ ! ನೀತಿಮಾತುಗಳೇತಕ್ಕೆ? ಕೊನೆಯುವರೆವಿಗೂ ಹೋರಾಡುವೆನು. ಉಳಿದರೆ ಖ್ಯಾತಿ. ಅಳಿದರೆ ಸ್ವರ್ಗ. ಅಳಿವ ತನುಗಳು ಏನು ಮಾಡಿದರೆ ಉಳಿಯುವುವು.? ಉಳಿದ ತನುಗಳು ಅಳಿಯದಿರುವುವೇ ? ಅಳಿವು ಎಂದಿಗೂ ಸಿದ್ಧ ಆದುದರಿಂದ ರಾಯನೊಡನೆ ಕಲಹವಲ್ಲದೆ ಸಂಧಾನದ ಮಾತೇ ಇಲ್ಲ." ಎಂದು ನುಡಿದನು. ಮುನಿಗಳೂ ಪೂಜಿಸುವ ನಮ್ಮ ತಂದೆಯು, ಸೋಮೇಶನ ಚರಣಗಳಿಗಲ್ಲದೆ ನರರಿಗೆ ಕೈ ಮುಗಿಯುವುದಿಲ್ಲ.ಈಪಂಥವನ್ನು ಕಾಪಾಡುವ ಭಾರವು ನನ್ನಸ್ವಾಮಿ ಸೋಮೇಶನದು ಸಂಧಾನದ ಮಾತನಾಡಿದರೆ ಮುಂದೇನಾಗುತ್ತದೆಂಬುದನ್ನೂತಿಳಿಯದೆ ನಮ್ಮಸೇನೆಯ ವೀರರು ವಿಪರೀತವಾಗಿ ಯೋಚಿಸುತ್ತಿರುವರು. ಕಾಳಗವನ್ನೇ ನಿಶ್ಚೈಸಿದ್ದೇವೆ. "ಎಂದು ಕುಮಾರ ಮಲ್ಲಯ್ಯ ರುದ್ರಮಾಪಸಿಗೆ ವಿನಯದಿಂದ ಹೇಳಿದನು. ರುದ್ರಯ್ಯನು ಹಿಂದಿರುಗಿ ಬಂದು ಸಂಧಾನ ಮುರಿದು ಬಿದ್ದ ಸಂಗತಿಯನ್ನು ವಿವರಿಸಿದನು. ಅವರು ಪಂಥ ಪರಾಕ್ರಮದ ಮಾತಲ್ಲದೆ ಸಂಧಾನಕ್ಕೆ ಒಪ್ಪರು ಎಂಬುದನ್ನು ಕೇಳಿ ರಾಯನು ಕೋಪಗೊಂಡನು.

ಬೂದಿಹಾಳು ಕೋಟೆಗೆ ಲಗ್ಗೆ ಹತ್ತಿ ಕೋಟೆಯನ್ನು ಕೆಡವಿ ಸಿರುಮ ಮತ್ತು ಅವನ ಮಕ್ಕಳ ತಲೆಗಳನ್ನು ಒಡೆದು ದೇಶದೇಶಕ್ಕೂ ತಿಳಿಸುವೆನು ಎಂದು ಎಡ ಬಲದವರನ್ನು ನೋಡಿದನು. ಕೂಡಲೇ ಮನ್ನೆಯರೂ ಮಾಂಡಲಿಕರೂ ಫವುಜನ್ನು ಮುಂದಕ್ಕೆ ನಡೆಸಿದರು. ಕರಿ ತುರಗ ಕಾಲ್ಬಳು ನೆಲ ಹೊರದಂತೆ ನಡೆಯಿತು. ಕೊಂಬು, ಕೊಳಲು, ತಪ್ಪಟೆ, ಡೋಲು, ನಿಸ್ಸಾಳ, ಬೊಂಬಾಳ, ಚಿನ್ನ ತುತೂರಿಗಳ ರವವು. ಬ್ರಹ್ಮಾಂಡವನ್ನು ತುಂಬಿತು. ಪಟುಭಟರು ಬೊಬ್ಬಿರಿದು ಕೋಟೆಯನ್ನು ಮುತ್ತಿ ಲಗ್ಗೆಯನ್ನಾರಂಭಿಸಿದರು. ಅಂಬಿನ ಮಳೆಯಿಂದ ಬೂದಿಪುರವು ಮುಚ್ಚಿಹೋಯಿತು. ಇದಕ್ಕೆ ಎದುರಾಗಿ ಸಿರುಮನ ಮಂದಿಯು ಎಚ್ಚ ಅಂಬುಗಳು ಅಂಬರವನ್ನಡರಿ ಸೇನೆಯ ಮೇಲೆ ಸುರಿದವು. ರಕ್ತ ಸುರಿದು ಸಿರಗಳು ಹಾರಾಡಿದವು. ಬಾಣಹೂಡಿ ಎಚ್ಚಾಡಲು ಸುಭಟರು ಗೋಣು ಮುರಿದು ಕೆಳಕ್ಕೆ ಬಿದ್ದು ಯಮ ಲೋಕವನ್ನು ಸೇರಿದರು. ಮಾನವಪತಿ ನರಸಿಂಗ ನಾಜ್ಞೆಯಿಂದ ಮತ್ತೆ ಬಹಳ ಸೇನೆಯು ಜೇನು ಹುಳದಂತೆ ಕೋಟೆಯ ಬಳಿಗೆ ಬಂದು ಏಣಿಗಳನ್ನು ಹಾಕಿ ಕೋಟೆಯ ಸುತ್ತ ಕ್ಷೋಣೀಶನ ಪರಿವಾರವು ಪ್ರಾಣದಾಸೆಯನ್ನು ತೊರೆದು ಕೋಟೆಯನ್ನಡರಲು, ಮೇಲಿನಿಂದ ಹೊಯ್ದ ಏಟಿಗೆ ಗಾಯಗಳಿಂದ ರಕ್ತ ಸೋರಿ ಜಾಜು ಕಲ್ಲಿನಲ್ಲಿಕ್ಕಿದ ಕೋಟೆಯೋ ಎಂಬಂತೆ ನೋಡುವವರಿಗೆ ಸೋಜಿಗವಾಯಿತು. ಸಿರುಮನ ಪಟುಭಟರ ಹತ್ತಿರ ಬಂದವರ ತಲೆಗಳ ಮೇಲೆ ಬಿತ್ತು ಕಲ್ಲುಗಳನ್ನು ಹಾಕಿ ತಲೆಯೊಡೆದರು. ಇನ್ನೂ ಹತ್ತಿರ ಬಂದವರ ತಲೆಗಳನ್ನು

ಕತ್ತಿಯಿಂದ ಕತ್ತರಿಸಿದರು. ಉರುವಣೆಯಿಂದ ಏರುವ ವೀರರ ಮೇಲೆ ಹುರಿದ ಮಳಲನ್ನು ಚೆಲ್ಲಿದರು. ಕಾದ ಅಂಬಲಿಯನ್ನು ಸುರಿದರು. ಪೆಟ್ಟಲುಗಳಿಂದ ಹೊಡೆದರು. ಡೆಂಕಣಿಯಿಂದಲೂ ಕವಣೆ ಕಲ್ಲುಗಳಿಂದಲೂ ಹೊಡೆದರು. ಉರಿವ ಸೀರೆಯನ್ನು ಹೊಕ್ಕ ಪತಂಗಗಳು ಮರಳಿ ಬರದೆ ಇರುವಂತೆ ಸಿರುಮನ ಕೋಟೆಯನ್ನೇರಿದ ಸುಭಟರು ಜೀವದಿಂದ ತಿರುಗಿದವರೇ ಇಲ್ಲ. ಕೋಟೆಯ ತೆನೆಗಳನ್ನು ಹತ್ತಿದವರನ್ನು ಕತ್ತಿ ಖಂಡೆಯಗಳಿಂದ [illegible] ಗಳಿಗೆ ಉರುಳಿಸಿದರು. ಕದನ ಪ್ರಚಂಡರು ಉರುವಣಿಸಿ ಕೋಟೆಯನ್ನು ಹತ್ತಲು ಮರೆಯಿಂದಿದ್ದು ಭೀಮ ಗೊಡತಿಗಳಿಂದ ಬಡಿಯಲು ಮೆದಳು ಹೊರಗೆ ಬಂದು ಉಸಿರು ಹೋಯಿತು ಮತ್ತೆ ರಾಯನು ಮೂದಲಿಸಲು ದೊರೆಗಳು ಓಡಿಹೋಗಿ ಕೋಟೆಯನ್ನು ಮುತ್ತಲು ಭಾರವಾದ ಕಲ್ಲುಗಳನ್ನು ಉರುಳಿಸಿ ಕೊಂದರು. ಕೊಳ್ಳೆದ್ದು ಸಂತಾಳ ಲಗ್ಗೆಯನ್ನು ಮಾಡಿ ಬಿಲ್ಲಾಳುಗಳು ಆಳುವೇರಿಯನ್ನು ಒಳಹೊಕ್ಕು ಬೊಬ್ಬೆಯಿಡುತ್ತಾ ಕತ್ತಿಗಳನ್ನೆತ್ತಿ ಹೊಡೆಯಲು ನಂಬಿಯಣ್ಣನು ಗಾಯಗೊಂಡು ಬಿದ್ದನು

೯

## ಕುಮಾರ ಮಲ್ಲಯ್ಯನ ಉದ್ದಗಿರಿ ಕುಮಾರರ ಒಂಟಿ ಕಾಳಗ

ಇದನ್ನು ಕಂಡು ರಾಯನ ಪಾಳೆಯದಲ್ಲಿದ್ದ ಉದ್ದಗಿರಿ ಕುಮಾರನು *ಮುದ್ದು ಕುಮಾರ ಮಲ್ಲಯ್ಯನೊಡನೆ ಒಂಟಿ ಕಾಳಗವನ್ನು ಮಾಡಬೇಕೆಂದು ಆಲೋಚಿಸಿ ತನ್ನ ಬಿರುದಿನ ತುರಗವನ್ನು ಹಲ್ಲಣಿಸಿ ತನ್ನ ತಂದೆಗೆ ತಿಳಿಸದಂತೆ ವೀರಭಟನೊಬ್ಬನನ್ನು ಮಾತ್ರ ಕರೆದುಕೊಂಡು ಹೊರಟನು. ಬೂದಿಪುರದ ಮುಂದಣ ಬಯಲಲ್ಲಿನಿಂತು ಕುಮಾರ ಮಲ್ಲಯ್ಯನನ್ನು ಕರೆಯಲು ಬಂಟನನ್ನು ಕಳುಹಿಸಿದನು. ಅವನು ಅಗಳ ಮೇಲೆ ನಿಂತು ಉದ್ದಗಿರಿ ಕುಮಾರನ ಆಶೆಯನ್ನು ಮಲ್ಲಯ್ಯನಿಗೆ ತಿಳಿಸಲು ಸಂತೋಷದಿಂದ ಹೊರಟು ತನ್ನ ತಂದೆ ತಾಯಿಗಳಿಗೆ ಹೇಳದೆ, ಮುಂದಿ ಮಕ್ಕಳನ್ನೂ ಕರೆದುಕೊಳ್ಳದೆ ತನ್ನ ತುರುಗವನ್ನೇರಿ ಬಯಲಿಗೆ ಓಡನು. ಈರ್ವರೂ ತುರಗದ ಮೇಲೇರಿ ಕಾಳಗಕ್ಕನುವಾದರು.

ಉದ್ದಗಿರಿ ಕುಮಾರನು ಮಲ್ಲಯ್ಯನನ್ನು ಕೋಪಾಟೋಪದಿಂದ ತಿವಿದನು. ಕುಮಾರ ಮಲ್ಲಯ್ಯನು ದಿಟ್ಟಿಸಿನೋಡಿ ಪಟ್ಟಕತ್ತಿಯನ್ನು ಎತ್ತಿ ಝಾಡಿಸಿ ಹೊಡೆದನು. ಉದ್ದಗಿರಿ ಕುಮಾರನು ಅದನ್ನು ತನ್ನ ಪಟ್ಟಕತ್ತಿಯಿಂದ ತಡೆದು ತನ್ನ ಖಂಡೆಯದ ತುದಿಯಿಂದ ಕುಮಾರ ಮಲ್ಲಯ್ಯನ ಎದೆಗೆ ತಿವಿದನು. ಕುಮಾರ ಮಲ್ಲಯ್ಯನು ಅದನ್ನು ತಪ್ಪಿಸಿಕೊಂಡು ತನ್ನ ಖಂಡೆಯದಿಂದ ಹೊಡೆದನು. ಬಹುಧೀರನೆನುತ್ತಾ ಉದ್ದಗಿರಿ ಕುಮಾರನು ತಿರುಗಿ ಹೊಡೆದನು. ಚಟಕುಮಾಡುತ್ತಾ ಕುಮಾರ ಮಲ್ಲಯ್ಯನು ಲಂಘಿಸಿ ತಪ್ಪಿಸಿಕೊಂಡನು. ಅನಂತರ ಇಬ್ಬರೂ ಗಾಯಗೊಳ್ಳದಂತೆ ಒಬ್ಬರಿಗೊಬ್ಬರು ಹೊಯ್ದಾಡಿದರು. ಹೀಗೆ ಹೊಯ್ದಾಡುತ್ತಿರುವಾಗ ಕುಮಾರ ಮಲ್ಲಯ್ಯನ ಆಯುಧವು ಮುರಿಯಲು ಮತ್ತೊಂದು ಖಂಡೆಯವನ್ನು ಹಿಡಿದು, "ಹೋಗು ಉದ್ದಗಿರಿ ಕುಮಾರನೇ ! ಹಿಂದಕ್ಕೆ ನಡೆ. ನೀನು ಸಾಹಸಿಗನೆಂದು ಗೊತ್ತಾಯಿತು. ಆದರ ಲೋಕೈಕವೀರನಾದ ನನ್ನೊಡನೆ ನಿನಗೆ ಕದನಬೇಡ. ಶಾಕಿನಿಯರು ದಣಿಯುವಂತೆ ಕಾದಾಡುವೆನು. ನಾನು ಮಡಿದರೆ ನನ್ನ ತಂದೆಗೆ ಇನ್ನೂ ನಾಲ್ವರು ವೀರ ಕುಮಾರರಿರುವರು. ನಿನ್ನ ತಂದೆಗಾದರೋ ನೀನೊರ್ವನೇ ಕಂದ; ನೀನು ಮಡಿದರೆ ನಿನ್ನ ರಾಜ್ಯಕ್ಕೆ ರಾಜನಿಲ್ಲದಂತಾಗುವುದು. ನೀನು ಕಾಳಗವನ್ನು ನಿಲ್ಲಿಸು. ವಿಧಿಯು ನಿನ್ನ ಬೆನ್ನುಹತ್ತಿ ಬರುವಾಗ ನೀನು ಕಾಳಗವನ್ನು ನಿಲ್ಲಿಸುವೆಯಾ ? ನಾನು ಕುಮಾರ ಮಲ್ಲನೆಂಬುದನ್ನು ನೀನು ಕೇಳ್ದರಿಯೆಯಾ" ಎಂದು ಪರಿಪರಿಯಾಗಿ ಹೇಳಿ

---

* : ಉದ್ದಗಿರಿ ಕುಮಾರ. ನೆಲ್ಲೂರು ಜಿಲ್ಲೆಯಲ್ಲಿರುವ ಉದಯಗಿರಿಗೆ ಉದ್ದಗಿರಿ ಎಂದು ಉಕ್ತವಾಗಿದೆ. (ಚಿಕ್ಕನಾಯಕನಹಳ್ಳಿ ೩೯) ಈ ಕಾಳಗದ ಕಾಲದಲ್ಲಿ ಅರವೀಟ ವಂಶದ

ದನು. ಅದಕ್ಕೆ ಉತ್ತರವಾಗಿ "ನಾನು ಉದ್ದಗಿರಿ ಕುಮಾರನೆಂಬ ಸುದ್ದಿಯು ನಿನಗೆ ತಿಳಿಯದಂತಿದೆ. ನಿನ್ನನ್ನು ಈಗಲೇ ಯಮಲೋಕಕ್ಕೆ ಸಾಗಿಸುವೆನು" ಎಂದು

---

ಬುಕ್ಕರಾಜ ಮತ್ತು ಈತನಮಕ್ಕಳು ಉದಯಗಿರಿಯ ಸುತ್ತಲೂ ರಾಜ್ಯವನ್ನು ಆಳುತ್ತಿದ್ದರು. ಈ ಬುಕ್ಕರಾಜನ ವಂಶವೃಕ್ಷದ ಅವಶ್ಯ ಭಾಗವನ್ನು ಮಾತ್ರ ಇಲ್ಲಿ ಕೊಟ್ಟಿದೆ.




ಬೂದಿಹಾಳು ಮುತ್ತಿಗೆಯಲ್ಲಿ ಕುಮಾರ ಮಲ್ಲಯ್ಯನೊಡನೆ ಒಂಟಿ ಕಾಳಗವಾಡಿದ ವೀರ'ಉದ್ದಗಿರಿ ಕುಮಾರ' ಈ ವಂಶವೃಕ್ಷದಲ್ಲಿ ಯಾರು ಎಂಬುದನ್ನು ಸ್ಥಿರೀಕರಿಸಲು ಸಾಕಾದಷ್ಟು ಆಧಾರಗಳಿರುವುದಿಲ್ಲ.

ಗರ್ಜಿಸಿ ಮಲ್ಲಯ್ಯನನ್ನು ಹೊಡೆದನು. ಎದುರಾಳಿಯ ಸತ್ವವನ್ನು ಕಂಡು ಮಲ್ಲಯ್ಯ ಮನದಲ್ಲಿಯೇ ಮೆಚ್ಚಿದನು. ಕುಡಿಮಿಾಸೆ ಕುಣಿಯುತ್ತಿರಲು ಮಲ್ಲ ಭೂಪನು ಮೂರು ಸಾರಿ ನಿನಗೆ ಹೇಳಿದೆನು; ನೀನು ಗರ್ವದಿಂದ ನನ್ನ ಮಾತನ್ನು ಮನ್ನಿಸದಲೇ ಕಾಳಗ ಮಾಡುತ್ತಿದ್ದಿಯೇ ಎಂದು ಹೇಳುತ್ತಾ ತನ್ನ ಕುದುರೆಯನ್ನು ಮುಂದಕ್ಕೆ ನೆಗೆಸಿ ಉದ್ದ ವಾದ ಕತ್ತಿಯನ್ನು ಎತ್ತಿ ಹೊಡೆಯಲು ಉದ್ದಗಿರಿ ಕುಮಾರನ ತಲೆಯು ಕತ್ತಿಯ ತುದಿಗೆ ಅಂಟಿಕೊಂಡು ಬಂದಿತು. ಅನಂತರ ಕುಮಾರ ಮಲ್ಲಯ್ಯನು ಎದುರಾಳಿಯ ಬಿರುದಿನ ಕುದುರೆಯನ್ನು ಹಿಡಿದು ತಂದು ತಂದೆಯ ಪಾದಕ್ಕೆರಗಿ ಕುದುರೆಯನ್ನು ಒಪ್ಪಿಸಿದನು. ಸಿರುಮನು ಸಂತೋಷದಿಂದ ಮಗನ ಗಲ್ಲವನ್ನು ಹಿಡಿದು ಅಲುಗಿಸಿ "ನಿನಗೆ ಧುರದಲ್ಲಿ ಯಾರೂ ಸಮರಿಲ್ಲ" ಎಂದು ಕೊಂಡಾಡಿ ಅದನ್ನು ಕುಮಾರ ಮಲ್ಲ ಯ್ಯನಿಗೇ ಉಡುಗೊರೆಯಾಗಿ ಕೊಟ್ಟನು. ಭೈರನಾಯಕನು ಅಳಿಯನ ಸಾಹಸಕ್ಕೆ ಮೆಚ್ಚಿ ಹಿರಿ ಹಿರಿ ಹಿಗ್ಗಿ ಕೊಂಡಾಡಿದನು.

ಇತ್ತ ರುದ್ರರಾಜಯ್ಯನು ಉದ್ದಗಿರಿ ಕುಮಾರನ ಮರಣದ ವೃತ್ತಾಂತವನ್ನು ತಿಳಿದು ರಾಯನಿಗೆ ಬಿನ್ನೈಸಿಕೊಂಡನು. ರಾಯನ ಕುಡಿಮಿಾಸೆ ಕುಣಿದುವು; ಕಡೆ ಗಣ್ಣು ಕೆಂಪೇರಿದವು. ಹುಬ್ಬುಗಂಟಿಕ್ಕಿ ಬೂದಿಪುರವನ್ನು ಹಾಳುಮಾಡುವೆನೆಂದು ಎಡಬಲದವರನ್ನು ನೋಡಲು. ದಳಪತಿಯು ಪೊಡವೀಶನ ಕೋಪವನ್ನು ಕಂಡು ರಾಯನಿಗೆ ಅಡ್ಡಬಿದ್ದು ನಮಸ್ಕರಿಸಿ ಸಂತೈಸಿ ಮುಂದಿನ ಕಾರ್ಯವನ್ನು ವಿವರಿಸಿದನು.

## ೧೦

ಸಿರುಮನು ಬಲುಗಟ್ಟಿಗ. ಕೋಟೆಯ ಬಳಿ ಬಂದಿರುವೆವಾದರೂ ಅಂಜದೆ
ಎದುರು ಕಾಳಗ ಮಾಡುತ್ತಿರುವನು. ರಾಜಕಾರ್ಯವು ಮಿಗಿಲಾಯಿತು. ಎಂದು
ಓಲಗದಲ್ಲಿ ನರಸಿಂಗ ಭೂವರನು ಕೋಪವಮಾಡಿದನು. ಇದನ್ನು ಕೇಳಿದ ಕೂಡಲೇ
ವಿಶ್ವರಾಜಯ್ಯನು ಕೋಪದಿಂದ ಗರ್ಜಿಸಿ ಮಾತನಾಡಿದನು. ಇಂದಿನ ಕಾಳಗವು
ನನ್ನದಿರಲಿ; ತುಂಬಿದ ಸಭೆಯಲ್ಲಿ ಗೊಲ್ಲ ಸಿರುಮಯ್ಯನನ್ನು ಬಲ್ಲಿದನೆಂದು ಕೊಂಡಾ
ಡಬಹುದೇ! ಇಂದು ಅವನನ್ನು ತಲ್ಲಣಗೊಳಿಸುತ್ತೇನೆ ಎಂದು ನರಸಿಂಗರಾಯನಿಂದ
ವೀಳೆಯವನ್ನು ಪಡೆದನು. ಕೂಡಲೇ ಒಂಬತ್ತುಸಾವಿರ ಕಾಲಾಳು ಪಡೆಯೊಡನೆ
ಭಸ್ಮಪುರವನ್ನು ಮುತ್ತಿದನು. ಎತ್ತುಗಲ್ಲುಗಳನ್ನು ಇಡಿಗಲ್ಲುಗಳನ್ನು ಇಕ್ಕಿದರು.
ಕತ್ತಿ ಕತ್ತಿಗಳಲ್ಲಿ ಕಡಿದು ಸುತ್ತತಿರುಗಿ ಹೊಡೆಯಲು ಅರಿದಳಗಳ ತಲೆಗಳೊಡೆದವು.
ಸಿರುಮಯ್ಯ ಸಿಕ್ಕಿದ ಹಿಡಿಯಿರಿ ಎಂದು ಲೆಕ್ಕವಿಲ್ಲದಷ್ಟು ಬಂಟರು ಅರಿಗಳ ಮೇಲೆ
ಬೀಳಲು ಸಿರುಮಯ್ಯನ ಭಟರು ಎದುರಿಸಿ ಕಡಿದರು. ಮಹಾಶೂರನಾದ ವಿಶ್ವರಾಜ
ಯ್ಯನ ದಳದವರು ಭೀತಿಗೊಂಡು ಮುಂದೋಡಿ ವಿಶ್ವರಾಜನನ್ನು ಮರೆಗೊಂಡರು.
ನನ್ನ ಪಂಥವು ಹೀನಾಯವಾಯಿತು ಎಂದು ಹೇಳುತ್ತಾ ಆನೆಯಿಂದ ಇಳಿದು ಸಮರ
ಕ್ಕನುವಾದನು. ತಲೆವರೆಯನ್ನಿಟ್ಟು ಬಲಕೈಯಿಂದ ಕೈದುವನ್ನು ಬೀಸುತ್ತಾ ಕೋಟೆ
ಯನ್ನಡರಿದನು. ಇದನ್ನು ನೋಡುತ್ತಿದ್ದ ನರಸಿಂಗರಾಯನು "ಇಂದು ಕಾಳಗ
ಬೇಡ ಹಿಂದಕ್ಕೆ ಬಾ" ಎಂದು ಹೇಳಿಕಳುಹಿಸಿದನು. "ನಾನು ಕೋಟೆಯನ್ನಿಳಿದರೆ
ನನ್ನ ಆಳುತನಕ್ಕೇ ಕುಂದಾಗುವುದು; ಹಾಗೆ ಮಾಡಿದೆನಾದರೆ ನನ್ನ ಮೀಸೆಯನ್ನು
ಕೀಳಿಸಲಿ" ಎನ್ನುತ್ತ ಕೋಟೆಯನ್ನಡರಿ ಕೊತ್ತಳದಲ್ಲಿದ್ದ ವೀರರಾರೆಂದು ಮಾತನಾ
ಡಿಸಿದನು. ಕೆಂಚಲ ತಿಮ್ಮನು ಎದುರಾಗಿ ಬಂದು ನಿಂತನು. "ನಿನ್ನನ್ನು ಕೊಂದರೆ
ನನ್ನ ಹೆಸರು ಕ್ಷೀಣವಾಗುವುದು. ನೀನೇ ನನ್ನನ್ನಿರಿದರೆ ಅದು ಅನ್ಯಾಯವಾಗು
ವುದು. ನನ್ನೊಡನೆ ಕಾದುವುದಕ್ಕೆ ನಿನ್ನ ದೊರೆಯನ್ನೇ ಕರೆ" ಎಂದು ನುಡಿಯಲು
"ನನ್ನನ್ನುಳಿಸಬೇಕಾದರೆ ನನ್ನ ರಾಜ ಬರುತ್ತಾನೆ" ಎಂದನು.

"ನಾನು ಕ್ಷತ್ರಿಯ ದೊರೆ. ನನ್ನೊಡನೆ ಕಾದಲು ದೊರೆಯನ್ನೇ ಬರಹೇಳು"
ಎಂಬ ನುಡಿಯನ್ನು ಕೇಳಿದ ವೀರಭದ್ರನು ವಿಶ್ವರಾಜನ ಬಳಿಗೆ ಕತ್ತಿಯನ್ನು
ಹಿಡಿದು ಬಂದನು. ವಿಶ್ವರಾಜನು ಘುಡಿಘುಡಿಸುತ್ತಾ ಸೋಮೇಶ್ವರನನ್ನು ನೆನೆ
ಯುತ್ತಾ ಕತ್ತಿಯನ್ನು ಬೀಸಿದನು. ವೀರಭದ್ರನು ಅದನ್ನು ತಪ್ಪಿಸಿಕೊಂಡು ಚಿಮ್ಮಿ
ತನ್ನ ಖಡ್ಗದಿಂದ ಬೀಸಿ ಹೊಡೆದನು. ಹೀಗೆ ಒಬ್ಬರಿಗೊಬ್ಬರು ಹೊಡೆದಾಡುತ್ತಾ
ತಪ್ಪಿಸಿಕೊಳ್ಳುತ್ತಾ ಇದ್ದರು. ಆವೇಳೆಗೆ ಚೆಲುವಮಲ್ಲನು ಕೊತ್ತಳವೇರಿ ಬಂದು "ನಿಮ್ಮ

ರಾಯರಿಗೆ ಕಾಣಿಕೆ” ಎಂದು ಸರವತ್ತಿ ಹೊಡೆಯಲು ವಿಶ್ವರಾಜನಿಗೆ ಬಲವಾದ ಏಟು ಬಿದ್ದು ಪ್ರಾಣನೀಗಿದನು.

ನರಸಿಂಗರಾಯನು ಇದನ್ನು ಕಂಡು ದುಮ್ಮಾನವಳಿದನು. ಅವನ ಸತಿಯರಿಗೆ ಸಹೆಗಮನ ಮಾಡಿರೆಂದು ಮಂತ್ರಿಯ ಸಂಗಡ ಹೇಳಿಕಳುಹಿಸಿದನು. ದುಃಖಿತರಾದ ರಾಣಿಯರು ಪತಿಯ ಶಿರವನ್ನು ಬೇಡಿದರು. ನರಸಿಂಗರಾಯನು ಕೆಂಪಯ್ಯನನ್ನು ಬೂದಿಹಾಳು ಕೋಟೆಗೆ ಕಳುಹಿಸಿ ವಿಶ್ವರಾಜಯ್ಯನ ಶಿರವನ್ನು ತರಿಸಿ ಮುತ್ತಿನ ತಲೆವರಿಯನ್ನು ತೆಗೆದು ಅವನ ಸತಿಯರನ್ನು ಅಗ್ನಿಗಿಡಲು ಶಿರವನ್ನು ಅವರ ಬಳಿಗೆ ಕಳುಹಿಸಿದನು. ರಾಣಿಯರು ತಮ್ಮ ಪತಿಯ ಶಿರದೊಡನೆ ಅಗ್ನಿಪ್ರವೇಶಮಾಡಿ ಸ್ವರ್ಗವನ್ನು ಸೇರಿದರು.

ಮುನ್ನೂರು ಕೆಂಪಿನ ಹರಿಗೆಯ ಸುಭಟರು ಬೂದಿಹಾಳನ್ನು ಮುತ್ತಿ ಸನ್ನೆಕಾಳಗವನ್ನು ಮಾಡಿದರು. ಕುಮಾರ ವೀರನು ಹೊನ್ನು ಹಣ ಚೆಲ್ಲಿ ತನ್ನ ಭಟರನ್ನು ಹುರಿದುಂಬಿಸಿದನು. ವೈರಿಗಳ ಹೆಣಗಳು ಅಗಳಲ್ಲಿ ತುಂಬಿದುವು.

ನೊಂದ ಮಂದಿಯನ್ನು ನರಸಿಂಗರಾಯನು ಕಂಡು ಅಂದವಳಿದನು. ಏನು ಮಾಡಿದರೂ ಬೂದಿಹಾಳು ಕೋಟೆಯನ್ನು ಹೊಂದಲಾಗಲಿಲ್ಲ. ಇನ್ನೊಂದು ಪ್ರಯತ್ನವನ್ನೆಸಗುವೆನು ಎನ್ನುತ್ತಾ ನರಸಿಂಗರಾಯನು ಬೆರಲ ತೋರಿದರೆ ಗುರಿಯಿಟ್ಟು ಹೊಡೆಯುವ ಡೆಂಕಣಿ ತಿಪ್ಪ ಎಂಬ ಪೆಟ್ಟಲವನನ್ನು ಕರೆಸಿದನು. ಕುಮಾರ ವೀರನಿಗೆ ಗುರಿಯಿಟ್ಟು ಹೊಡೆದು ಕೆಡವಿದರೆ ಬಿರುದಿನ ಉಡುಗೊರೆಯನ್ನು ಕೊಡುತ್ತೇನೆ ಎಂದು ನುಡಿದನು. ಡೆಂಕಣಿ ತಿಪ್ಪನು ಸಂತೋಷಗೊಂಡು ಈರೀತಿ ಪಂಥವನ್ನು ಮಾಡಿದನು. ರಾಯರ ದೇವ, ಪರಾಕು! ನನ್ನ ಕೈಚಳಕವನ್ನು ನೋಡು ಎಂದು ಹೇಳಿ ಸಿಡಿಯ ಕೊಂಡಿಯನ್ನು ಬಗ್ಗಿಸಿ ಒತ್ತಿ ಬಿಡಲು ಗುಡು ಗಡು ಗುಡು ಢುಂ ಎಂದು ಡೆಂಕಣಿ ಗುಂಡು ಕಡುಗಲಿ ಸಿರುಮನ ಮಗ ವೀರನನ್ನು ಕೆಡವಿ ಎದೆಗೆ ತಗುಲಿತು. ಕೂಡಲೇ ಅವನ ಪ್ರಾಣವು ಅಳಿಯಿತು. ಪಕ್ಕದಲ್ಲಿದ್ದವರು ಗೋಳಿಟ್ಟರು. ಇತ್ತ ನರಸಿಂಗರಾಯನು ದೃಷ್ಟಿಸಿನೋಡಿ ವೀರಭದ್ರನು ಮಡಿದುದು ಪುಸಿಯಲ್ಲವೆನುತ್ತಾ ಡೆಂಕಣಿ ತಿಪ್ಪನಿಗೆ ಕಡಗ ಭಾಪುರಿಗಳನ್ನು ಇತ್ತು ಮನ್ನಿಸಿದನು.

ಧುರಗಲಿ ವೀರನ ಮರಣವಾರ್ತೆಯನ್ನು ಓಲಗದಲ್ಲಿದ್ದ ಸಿರುಮನಿಗೆ ಚಾರರು ಓಡಿ ಬಂದು ಬಿನ್ನೈಸಿದರು. ಮೋಹದ ಕಂದ ಚಿಕ್ಕ ವೀರನ ಮರಣವಾರ್ತೆಯ ವಿವರವನ್ನೂ ಕೇಳಿ ಸಿರುಮನು ಕಂಬನಿ ಗರೆದನು. ಸಭಿಕರು ತಲ್ಲಣಿಸಿದರು. ತಾಯಿ ಚಿಕ್ಕಮ್ಮನು ಗೋಳಾಡಿದಳು. ಸತಿಯರ ದುಃಖಕ್ಕೆ ಪಾರವಿಲ್ಲವಾಯಿತು. ಒಡಹುಟ್ಟಿದವರು ಕಡು ದುಃಖದಿಂದ ಹುಡಿಯಲ್ಲಿ ಹೊರಳಾಡಿದರು. ಅಣ್ಣಂದಿರು ಹೆಣ

ವನ್ನು ದಂಡಿಗೆಯಲ್ಲಿಟ್ಟು ತಂದೆಯ ಚಾವಡಿಗೆ ತಂದಿರಿಸಿ ಚಿಮ್ಮುರಿ ಸುತ್ತುಗಳಿಸ್ತ್ರ
ಗಂಧ, ಕಸ್ತೂರಿಗಳಿಂದ ಶೃಂಗಾರ ಮಾಡಿ ಪಟ್ಟಾವಳಿಯನ್ನು ಹೊದಿಸಿದರು.
ತಾಯಿಯು ಹೊಟ್ಟೆಯನ್ನು ಹೊಡೆದುಕೊಳ್ಳುತ್ತಾ ವಿಧಿಯೇ! ಎನ್ನುತ್ತ ಮುಂದಿನ
ಕಂಭವನ್ನು ಹಾಯಿದಳು. ಇಂದು ಮುಖಿಯರಾದ ವೀರನ ಸತಿಯರು ಶರೀರದ
ಮೇಲೆ ಬಿದ್ದು ಹೊರಳಿದರು. ಚಿಕ್ಕಮ್ಮನು ಬಸವಳಿದು ನನ್ನ ಭವನದೊಳಕ್ಕೆ ಹೋಗಿ
ಸೊಸೆಯರನ್ನು ಶೃಂಗರಿಸಿದಳು. ಊಟಮಾಡಿಸಿದಳು. ಕಾಲುಕುಪ್ಪಸಗಳನ್ನೂ ರವಿಕೆ
ಗಳನ್ನೂ ತೊಡಿಸಿ ಚಿತ್ರಾವಳಿಯಪಟ್ಟೆ ಬಟ್ಟೆಗಳನ್ನು ಉಡಿಸಿದಳು. ಭಂಗಾರ ಭೂಷ
ಣಗಳನ್ನು ಧರಿಸಿ ಸೋಮೇಶನನ್ನು ಧ್ಯಾನಿಸುತ್ತಾ ಸತಿಯರುಗಂಡನನ್ನುಪರಿಪರಿಯಾಗಿ
ಕೊಂಡಾಡಿದರು. ನೋಡುವ ಕಣ್ಣು, ಕೇಳುವ ಕಿವಿ, ಸವಿ ಮಾತನಾಡುವ ಜಿಹ್ವೆ
ನಾಸಿಕ ಮುಂತಾದ ಪಂಚೇಂದ್ರಿಯಗಳ ಭೀತಿಯನ್ನು ತೊರೆದು ಕಾದಿದ ವೀರ!
ಮುಂದುವರಿದು ಬಂದ ನರಸಿಂಗರಾಯನ ದಂಡನ್ನು ಮುರಿದ ವೀರ! ಡೆಂಕಣಿಯ
ಗುಂಡುತಾಗಿ ಮಡಿದ ವೀರ! ಪ್ರಾಣಬಿಡುವಾಗ ನಿನ್ನಧೀರರಾಣಿಯರನ್ನುನೆನೆದೆಯಾ!
ತರುಣ ಮಿತ್ರರ ಶೂರರ ಜನನೀ ಜನಕರ ಹಂಬಲು ಹರಿಯಿತೆ! ಎಂದು
ಮುಂತಾಗಿ ಹಂಬಲಿಸಿದರು. ಚಿಕ್ಕಮ್ಮ ಅತ್ತೆಗೂ ಸಿರುಮಯ್ಯ ಮಾವನಿಗೂ ನಮ
ಸ್ಕರಿಸಿ ಉಕ್ಕುವ ಅಳುವನ್ನು ಸಂತೈಸಿ, ವಾದ್ಯರವಗಳಾಗುತ್ತಿರುವಾಗ ಮೆರೆದರು.
ಸೀರೆಯನ್ನೇ ತಿದ್ದುತ್ತಾ, ಮುಂಗುರುಳನ್ನು ನೇವರಿಸುತ್ತಾ ಸೆರಗನ್ನು ಸಿಕ್ಕಿಸಿಕೊಂಡು
ಕಿರುನಗೆ ನಗುತ್ತಾ ಬೂದಿಪುರದ ಕೇರಿಗಳಲ್ಲಿ ನಡೆದರು. ಗಂಗೆಯ ತಡಿಯಲ್ಲಿ ಮುತ್ತೈ
ದೆಯರಿಗೆ ಬಾಗಿನಗಳನ್ನು ಕೊಟ್ಟು ಜಯ ಜಯವೆನ್ನುತ್ತಾ ಸಮಾಧಿಯ ಬಳಿಗೆ
ಬಂದರು. ಕುಮಾರ ವೀರಣ್ಣನನ್ನು ಎತ್ತಿತಂದು ಸಮಾಧಿಯೊಳಗಿರಿಸಿದರು. ಅವನ
ಹತ್ತಿರ ಅವನ ಪತ್ನಿಯರನ್ನೂ ಕುಳ್ಳಿರಿಸಿದರು. ತಂದೆ ತಾಯಿಗಳು ಮಗ ಸೊಸೆಯರ
ಮುಖವನ್ನು ನೋಡಿ ಹಂಬಲಿಸುತ್ತಾ ಬಾಯಿಯಲ್ಲಿ ಅಕ್ಕಿಯನ್ನಿಟ್ಟರು. ಸಿರು
ಮನ ರಾಣಿ ಚಿಕ್ಕಮ್ಮನು ಕಂದಮ್ಮಗಳಿರಾ ಹೋಗುವಿರಾ! ಅಕ್ಕಟಾ ಎಂದು ಹಲು
ಬಿದಳು. ಸಜ್ಜನರು ತುಂಬಿ ಮಣ್ಣು ಮುಚ್ಚಿದರು. ಉಫೆ! ಉಫೆ! ಎನ್ನುತ್ತಾ
ಸಮಾಧಿಯನ್ನು ಮುಚ್ಚಿ ದುಃಖದಿಂದ ತಮ್ಮ ಗೃಹಗಳಿಗೆ ಹಿಂತಿರುಗಿದರು.

ವೀರಭದ್ರುಮಡಿದ ಸುದ್ದಿಯು ಸ್ನೇಹಿತನಾದ ವೇದರಾಜನಿಗೂ 'ಭಾವಮೈ
ದುನನಾದ ರುದ್ರುರಾಜನಿಗೂ ತಿಳಿಯಿತು. ಹರ ಹರ! ಎನ್ನುತ್ತಾ ಮರುಗಿದರು.
ಆಲೋಚಿಸಿ ಸಿರುಮೇಂದ್ರನನ್ನು ಕಾಣಿಸಿ ಉಭಯರಾಯರಿಗೂ ಸಂಧಾನ ನಡೆ
ಸಬೇಕೆಂದು ನರಸಿಂಗರಾಯನನ್ನು ಕಂಡು ಅಭಯವನ್ನು ನೀಡಬೇಕೆಂದು
ಬಿನ್ನೈಸಿದರು. ಕಪ್ಪವನ್ನು ಕೊಟ್ಟರೆ ಸಿರುಮನ ಪ್ರಾಣವನ್ನು ಉಳಿಸುವುದಾಗಿ
ಹೇಳಿ ನರಸಿಂಗರಾಯನು ಒಪ್ಪಿ ರುದ್ರನನ್ನು ಸಂಧಾನಕ್ಕಾಗಿ ಕಳುಹಿಸಿದನು. ರುದ್ರು
ರಾಜನು ಕೋಟೆಯ ಬಳಿಗೆ ಬಂದು ಅಗಳ ದಂಡೆಯಿಂದ ಕೈನೆಗಹಿ ಬಿಲ್ಲಿನವರಿಗೆ

ಸನ್ನೆ ಮಾಡಿ ಕರೆದು ತಾನು ಬಂದ ಸಂಗತಿಯನ್ನು ಸಿರುಮನಿಗೆ ಹೇಳಿ ಕಳುಹಿಸಿದನು. ಸಿರುಮ ಭೂವರನು ಅಳುವೇರಿಯನ್ನು ಅಡರಿ ಭಾವರುದ್ರಯ್ಯನು ಬಿಜಯ ಮಾಡಿದ ಭಾವವನ್ನು ಕೇಳಲು ವೀರಭದ್ರನ ಸಾವಿನಿಂದ ಉಂಟಾದ ನೋವನ್ನು ಕೇಳಿ ದುಃಖವನ್ನು ತಾಳಿ ನರಸಿಂಗ ಭೂವರನು ಉಡುಗೊರೆಯನ್ನು ಕಳುಹಿಸಿರುವನು. ಊರನ್ನು ಉಳಿಸಿಕೊಂಡು ರಾಯನೊಡನೆ ಕದನವನ್ನು ನಿಲ್ಲಿಸು. ಕ್ಷೋಣಿಯಲ್ಲಿ ಹೆಸರಾದ ಮಕ್ಕಳನ್ನು ಹೊಂದಿದ ಪುಣ್ಯವಂತ ನೀನು. ಪಂಥಮಾಡಿ ವೀರಾಧಿ ವೀರನೆಂದು ಕೀರ್ತಿಯನ್ನು ನೀನು ಪಡೆದಿರುತ್ತೀಯೆ. ಇನ್ನಾದರೂ ಉಳಿದ ಬಂಧುವರ್ಗದವರನ್ನು ಉಳಿಸಿಕೊಳ್ಳುವುದು ಉತ್ತಮ ಮಾರ್ಗವೆಂದು ಸೂಚಿಸಿದನು. ಹಿರಿಯನಾದ ನೀನು ಬೀಗತನದಲ್ಲಿ ಆಡುವ ಈ ನುಡಿ ಸರಿಯಾಗಿದೆ. ಆದರೆ ಸಿರುಮನು ಪರಬಲ ಮರ್ದನ ಕೋಲಾಹಸೆಂಬುದನ್ನು ಮರೆತೆಯಾ! ಹುಲ್ಲು ಗುಡಿಸಲಿನಲ್ಲಿ ವಾಸಿಸುವ ಮರುಳ ಗೊಲ್ಲರು ನಾವು; ಸಿರಿತನ ನಮಗೇನುಗೊತ್ತು? ಕಲ್ಲು ಗೃಹದಲ್ಲಿದ್ದ ಕೌರವ ರಾಯನೂ ಪರ್ಣಕುಟಿಯಲ್ಲಿದ್ದ ಪಾಂಡವರೂ ಎಲ್ಲಾ ಕಾಲವೂ ಬದುಕಿದರೇ? ರಾಯನೊಡನೆ ಸಂಧಾನಸಲ್ಲದು. ಎಣ್ಣೆ, ಅರಿಸಿನ ಕಣ್ಣು ಕಪ್ಪುಗಳನ್ನಿಟ್ಟು ಹೆಣ್ಣುಡಿಗೆಯನ್ನುಟ್ಟಿರುವೆನೆಂದು ತಿಳಿದಿರಾ! ಸಿರುಮನು ಕೊನೆಯ ವರೆಗೂ ಕಾದುವನೆಂದು ಬಣ್ಣಗೆಡದೆ ಹೋಗಿ ನರಸಿಂಗರಾಯನಿಗೆ ಹೇಳಿರಿ ಎಂದನು. ಕೊತ್ತಳದಲ್ಲಿ ಕಾಯುತ್ತಿದ್ದ ಕಡುಗಲಿ ಮಲ್ಲನು ಬಂದು ಮಾವಯ್ಯ ದುಃಖಪಡದೆ ಭ್ರಾಂತಿಯಿಲ್ಲದೆ ಹೋಗಿರಿ. ನಾವು ಯುದ್ಧವನ್ನೇ ನಿಶ್ಚಯಿಸಿದ್ದೇವೆ. ಎಂದು ನುಡಿದನು. ರುದ್ರರಾಜನು ಹಿಂದಿರುಗಿ ತಾನು ಮಾತನಾಡಿದ ಸಂಧಿಕಾರ್ಯವು ವಿಫಲವಾದುದನ್ನು ನರಸಿಂಗರಾಯನಿಗೆ ಬಿನ್ನೈಸಿದನು.

## ೧೧

ಬೂದಿಹಾಳಿಗೆ ಬಂದು ಆರು ತಿಂಗಳಾಯಿತು. ಊರು ಸಾಧ್ಯವಾಗಲಿಲ್ಲ. ಎಂದು ರಾಯನು ಆಲೋಚಿಸುತ್ತಿರಲು ನೆಲಗನ್ನವನ್ನು ಮಾಡಿ ಸಿರುಮನನ್ನು ತಂದೊಪ್ಪಿಸುವೆವು ಎಂದು ಕೆಲವು ವೀರರು ನುಡಿದರು. ದಳಪತಿಯು ಕಾಮಾಟಗರನ್ನು ಕರೆಸಿ ನೆಲಗನ್ನವನ್ನು ತೆಗೆಯಬೇಕೆಂದು ಅಪ್ಪಣೆ ಮಾಡಿ ವೀಳೆಯವನ್ನು ಕೊಡಲು ಇನ್ನೆಂಟು ದಿವಸಕ್ಕೆ ನೆಲಗನ್ನವನ್ನು ಪೂರೈಸಿ ಸಿರುಮನನ್ನು ಮಂಚ ಸಹಿತ ಹಿಡಿದು ತರುವೆವು ಎಂದು ಹೇಳಿ ವೀಳೆಯವನ್ನು ಹಿಡಿದರು. ಹಾರೆ ಸಲಕೆ ಗುದ್ದಲಿಗಳನ್ನು ತಂದು ಮೂರುಸಾವಿರ ಕಾಮಾಟಗರು: ಕನ್ನಕೊರೆದರು. ರಾಯನು ಬಂದುನೋಡಿ ಸಂತೋಷಿಸಿ ಕಾಮಾಟಗರಿಗೆ ಉಡುಗೊರೆಯನ್ನು ಕೊಟ್ಟು ಮರ್ಯಾದಿಸಿದನು. ಸೂರ್ಯೋದಯ ಕಾಲಕ್ಕೆ ಸರಿಯಾಗಿ ಹೋಗಿ ಊರುಸೂರೆಮಾಡಿ ಸಿರುಮನನ್ನು ಹಿಡಿದು ತರಬೇಕೆಂದು ನರಸಿಂಗರಾಯನು ದಳಪತಿಗೆ ಅಪ್ಪಣೆ ಮಾಡಿದನು.

ಈ ಸುದ್ದಿಯು ರುದ್ರರಾಯನಿಗೆ ತಿಳಿಯಿತು- ಬಹುಪರಿಯಾಗಿ ಚಿಂತಿಸಿದನು. ಏಕಾಂತದಲ್ಲಿ ಡಂಕಣಿ ತಿಪ್ಪಯ್ಯನನ್ನು ಕಂಡು ಹೊನ್ನು ಉಡುಗೊರೆ ಲಂಚವಿತ್ತು ಡೆಂಕಣಿ ಗುಂಡನ್ನು ತರಿಸಿ ಅದರ ಮೇಲೆ ಸುದ್ದಿಯನ್ನೆಲ್ಲಾ ಬರೆದನು. ಈ ಗುಂಡನ್ನು ಗುರಿಮಾಡಿ ಸಿರುಮನ ಓಲಗದಲ್ಲಿ ಹೋಗಿ ಬೀಳುವಂತೆ ಮಾಡೆಂದು ತಿಳಿಸಿದನು. ಅದರಂತೆ ಗುಂಡು ಸಿರುಮನ ಓಲಗದಲ್ಲಿ ಬೀಳಲು ತರಿಸಿ ಕರಣಿಕರಿಂದ ಓದಿಸಿದನು.

"ಶ್ರೀಮತು ಸಿರುಮ ಭೂವರಗೆ ಭಾವ ರುದ್ರಯ್ಯನು ವಿನಯದಿಂದ ಮಾಡುವ ಬಿನ್ನಹ, ಊರಿನೊಳಕ್ಕೆ ನೆಲಗನ್ನ ನಡೆದಿದೆ. ನಿಮ್ಮಾಣೆ ಮಂಚ ಸಹಿತ ನಿಮ್ಮನ್ನು ಹಿಡಿದು ತರಲು ಕಾರ್ಯನಡೆದಿದೆ. ಮೈಮರೆಯದಿರಿ. ಮುಂಚೆಯೇ ಕಾಪಾಡಿಕೊಳ್ಳುವ ಬುದ್ಧಿಯನ್ನು ಮಾಡಿರಿ" ಎಂಬ ಒಕ್ಕಣಿಕೆಯನ್ನು ಕೇಳಿದನು. ಸಂತೋಷ ಉಕ್ಕಿತು. ಕಲ್ಲರಸ ಮಂತ್ರಿಯೊಡನೆ ಹೊರಟು ಕನ್ನವನ್ನು ಹುಡುಕಿದರು. ಹಿರಿಯ ಹೆಬ್ಬಾಗಿಲಿನಿಂದ ಕೋಟೆಯ ಸುತ್ತ ತಿರುಗಿದರು. ಹಿರಿಯ ಸೇತುವೆಯ ಬಳಿ ಗುರುತು ಕಾಣಿಸಿತು. ತನ್ನ ಕಾಮಾಟಗರನ್ನು ಕರೆಸಿ ಎದುರು ಕನ್ನವನ್ನು ತೆಗೆಸಿ ಒಳಹೊಕ್ಕು ಪರೀಕ್ಷಿಸಿದನು. ತನ್ನ ಉಗ್ರಾಣದಿಂದ ಹನ್ನೆರಡುಖಂಡುಗ ಮದ್ದನ್ನು ತರಿಸಿ ಹೆಬ್ಬಿದಿರುಗಳಲ್ಲಿ ತುಂಬಿಸಿ ಕನ್ನದೊಳಗೆ ಹರಡಿಸಿದನು. ನಾಲ್ಕಾರು ಸಾವಿರ ಬಾಣಗಳನ್ನಿಡಿಸಿದನು. ಸರಬತ್ತಿಯನ್ನು ಜೋಡಣೆ ಮಾಡಿಸಿ ಸೇತುವೆ ಕಟ್ಟಿಸಿದನು. ಕಲ್ಲುಗಳನ್ನು ಹಾಕಿಸಿ ಕನ್ನವನ್ನು ಮುಚ್ಚಿಸಿದನು. ಬತ್ತಿಗೆ ಬೆಂಕಿಯನ್ನಿಡಲು ಘುಡಿಘುಡಿಸಿ ಗುಂಡು ಬಾಣಗಳು ಬಿದ್ದು ಅನೇಕರು ಮಡಿದರು. ಕಡೆಯಲ್ಲಿದ್ದವನೊಬ್ಬನು ಮಾತ್ರ ಓಡಿಹೋಗಿ ರಾಯನಿಗೆ ಈ ಸಂಗತಿಯನ್ನು ಹೇಳಲು ರಾಯನು ತನ್ನ ಪ್ರಯತ್ನವು ವಿಫಲವಾದದ್ದನ್ನು ಕಂಡು ಚಿಂತಿಸಿದನು.

## ೧೨

ದೊರೆ ದೊರೆಗಳು ಮಂದಿ ಮಕ್ಕಳು ಕನ್ನದಲ್ಲಿ ಬೆಂದು ಹೋದ ಸುದ್ದಿಯನ್ನು ಕೇಳಿ ರಾಯನು ಬಗೆಬಗೆಯಿಂದ ಓಲಗ ಗೊಟ್ಟು ಮುಂದೇನು ಮಾಡಬೇಕೆಂದು ಆಲೋಚಿಸಿದನು. ಮನ್ನೆಯರಲ್ಲಿ ಸಿರುಮನು ಮಹಾಪ್ರಚಂಡನಾಗಿರುವನು. ಮೀಸೆಯರ ಗಂಡನೆಂಬ ಬಿರಿದು ಧರಿಸಿ ನಮ್ಮನ್ನು ಲಕ್ಷಿಸದೇ ಇರುವನು. ನಮ್ಮ ಉಪಾಯಗಳಿಗೆ ಮೋಸಹೋಗುವವನಲ್ಲ. ಕೋಟೆಯು ನಮಗೆ ತೋಳು ಹೊಗುವ ಬಗೆಯನ್ನು ಕಾಣೆ ಎಂದು ರಾಯನು ನುಡಿಯಲು ಸಭಿಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡುತ್ತಿದ್ದರು.

ಇತ್ತ ಕುಮಾರ ಮಲ್ಲಯ್ಯನು ಕೋಟೆಕಾಯುವವರಿಗೆ ಎಚ್ಚರ ಕೊಟ್ಟು ತಾನು ಅರಮನೆಗೆ ಹೋದನು. ತಾಯಿ ಚಿಕ್ಕಮ್ಮನು ಆರತಿ ಎತ್ತಿದಳು. ಸತಿಯರು ಭಂಗಾರದ ಗಿಂಡಿಗಳಲ್ಲಿ ನೀರನ್ನು ತಂದು ಪಾದಗಳನ್ನು ತೊಳೆದು ಮಣಿಖಚಿತ ಗದ್ದುಗೆಯ ಮೇಲೆ ಕೂಡಿಸಿದರು. ಚಿನ್ನದ ಗಿಂಡಿ ಹರಿವಾಣಗಳನ್ನಿಟ್ಟು ನವರಸ ಭಕ್ಷ್ಯ ಭೋಜ್ಯಗಳನ್ನು ಬಡಿಸಿದರು. ಕುಮಾರ ಮಲ್ಲಯ್ಯನು ಸಂಭ್ರಮದಿಂದ ಸತಿಯರೊಡನೆ ಉಣಲಾರಂಭಿಸಿದನು. ರಾಯನ ದಂಡು ಬಂದು ಕೋಟೆಯ ನಾಲ್ಕೂ ಕಡೆಗೆ ಮುತ್ತಿದೆ; ಬೆಲಗೂರು ಭೈರನಾಯಕನು ಯುದ್ಧಮಾಡದೆ ಓಡಿಹೋಗುತ್ತಿದ್ದಾನೆ ಎಂಬ ವಾರ್ತೆಯು ಬರಲು ಕುಮಾರ ಮಲ್ಲಯ್ಯನು ಕೈತೊಳೆಯದೆ ಅಲಗು ಹಿಡಿದು ಕೋಟೆಯ ಕಡೆಗೆ ಓಡಿದನು. ಓಡಿಹೋಗುವ ಭೈರನಾಯಕನನ್ನು ಅಡಗಟ್ಟಿದರೂ ಕೋಟೆಯನ್ನು ಹತ್ತಿ ಧುಮುಕುತ್ತಿರಲು ಮಲ್ಲಯ್ಯನು ತನ್ನ ಕೈದುವಿನಿಂದ ಹೊಡೆದನು. ಕೋಟೆ ತೆನೆಯು ಮುರಿದುಬಿತ್ತು. ಭೈರನಾಯಕನ ಮಲ್ಲಗಾಸೆಯು ಊರೊಳಗೆ ಸಿಕ್ಕಿತು. ಓಟಲುತ್ತಾ ಶತ್ರುಪಾಳಯಕ್ಕೆ ಓಡಲು ಅವರು ತಮ್ಮ ಕಡೆಗೆ ಕರೆದುಕೊಂಡರು. ಮಾವಯ್ಯ! ಯುದ್ಧಕ್ಕೆ ಅಂಜಿ ಓಡಿದೆಯಾ! ಈಗ ನೀನು ಜೀವವನ್ನುಳಿಸಿಕೊಂಡರೆ ನರಕಕ್ಕೆ ಶೋಭಿತವಾಗುತ್ತೀಯೆ ಎಂದು ಮಲ್ಲಯ್ಯನು ನುಡಿದನು. ಲಲನೆ ಚಿಕ್ಕಮ್ಮನು ತನ್ನ ತಮ್ಮ ಜೀವದಾಸೆಯಿಂದ ಓಡಿಹೋದುದನ್ನು ಕೇಳಿ ನಂಬಿದ ತಮ್ಮನು ಮೋಸಮಾಡಿದನೆಂದು ತಲೆಯನ್ನು ಚಚ್ಚಿಕೊಂಡಳು. ಹೆಸರಾದ ಕುದುರೆ, ಬೆಲೆಬಾಳುವ ಹಚ್ಚಡ (ವಸ್ತ್ರಗಳು) ಬಣ್ಣ ಬಂಗಾರ ಮುಂತಾದ ಪರಿಪರಿ ವಸ್ತುಗಳನ್ನು ತರಿಸಿಕೊಟ್ಟ ಸಿರುಮ ಭಾವನನ್ನು ಅಗಲಿ ಹೋಗಬಹುದೇ! ಸಕ್ಕರೆ ಕೆನೆಹಾಲು ತುಪ್ಪ ಬಾಳೆಯಹಣ್ಣುಗಳನ್ನು ಮಕ್ಕಳಿಗೆ ಮರೆಮಾಚಿ ನಿನಗೆ ಕೊಡುವೆನು. ನಿನ್ನೊಡಲಿಗೆ ಕಟ್ಟಿರುವೆಯುಗೂಡಿಕ್ಕಲಿ! ಎಂದು ಅಳಲಿದಳು.

ಅತ್ತ ರಾಯನು ಬೆಲಗೂರು ಭೈರಯ್ಯನನ್ನು ತನ್ನ ಹತ್ತಿರಕ್ಕೆ ಕರೆದು ಸತ್ತಿಗೆ ಪಲ್ಲಕ್ಕಿಗಳನ್ನೂ ಉತ್ತಮ ಉಡುಗೊರೆಗಳನ್ನೂಕೊಟ್ಟು ಮನ್ನಿಸಿದನು. ಭೈರಯ್ಯನು ಕಾಳಗಕ್ಕೆ ಅನುವಾಗಿ ಎಂದು ಹೇಳಲು ರಾಯನು ತನ್ನ ದಂಡನ್ನೆಲ್ಲಾ ಕಳುಹಿಸಿ ಬೂದಿಪುರಕ್ಕೆ ದಾಳಿಯಿಟ್ಟನು. ಕೋಟೆಯ ಸುತ್ತಲೂ ಆಳಿನಮೇಲೆ ಆಳು ಹತ್ತಿ, ಆರ್ಭಟಿಸುತ್ತಾ ಕೋಲಾಹಲದಿಂದ ಕೋಟೆಯನ್ನಡರಿದರು. ಕೋಟೆಯನ್ನು ಹತ್ತಿ, ಕತ್ತಿ ಸಬಳ ಗಡೆಗಳನ್ನು ಹಿಡಿದು ಕೊತ್ತಳ ಕೊತ್ತಳಗಳನ್ನು ಆವರಿಸಿದರು. ಸಿರುಮನು ಇದನ್ನು ಕಂಡು ತನ್ನ ಭಟರನ್ನೆಲ್ಲಾ ನಾಲ್ಕುದಿಕ್ಕಿಗೂ ಕಳುಹಿಸಲು ಶತ್ರುಗಳ ಮೇಲೆ ಬಿದ್ದು ಇರಿದು ನೂಕಿದರು. ಬಾಣದ ಬಸವಯ್ಯನು ಪ್ರಾಣದಾಸೆಯನ್ನು ಬಿಟ್ಟು ಹೋರಾಡಿದನು. ಕಾಚನು ಬೊಬ್ಬೆಯಬ್ಬರದಿಂದ ಕಾದಾಡುತ್ತಾ ಎಲ್ಲೆಲ್ಲಿಯೂ ತಾನೇ ತಾನಾಗಿಯೇ ತೋರುತ್ತಾ ಮರುಳುಗಳಿಗೆ ಹಬ್ಬವನ್ನು ಮಾಡಲು ಅವು ಕಾಚನನ್ನು ಹರಸಿದವು. ಈರೀತಿ ಕಾಚನು ನಾಲ್ಕುಗಳಿಗೆ ಪರಿಯಂತರ ಅರಿಬಲವನ್ನು ತುಂಡರಿಸುತ್ತಾ ಇರಲು ಏಳ್ನೂರು ಮಂದಿ ಮಡಿದುಬಿಟ್ಟರು. ಇದನ್ನು ಕಂಡು ರೋಷದಿಂದ ಕಾಚನ ಮೇಲೇರಿಬಂದು ಪೆಟ್ಟಲು ಸರಳುಗಳಿಂದ ಹೊಡೆಯಲು ಬಾಣದ ಗಾಯಗಳಿಂದ ಕಾಚನು ನೆಲಕ್ಕುರುಳಿದನು. ಒಂದು ಝಾವದ ಲಗ್ಗೆಯ ಕಾಳಗದಲ್ಲಿ ಏಳೆಂಟು ಸಾವಿರ ಪಟುಭಟರನ್ನು ಮುಂಗೆಡಿಸಿ ಮಲ್ಲಯ್ಯನು ಕಾಚನ ಬಳಿಗೆ ಬಂದನು. ಆ ವೇಳೆಗೆ ಗೊಲ್ಲ ಸಿರುಮನ ಸೊಸೆ ಮಕ್ಕಳನ್ನು ಕೊಂಡದಲ್ಲಿ ಕೊಲ್ಲುವುದನ್ನು ನೋಡಬಾರದೆಂದು ರವಿಯು ಪಡುವ ಕಡಲಲ್ಲಿ ಮುಳುಗಿದನು. ನರಸಿಂಗರಾಯನು "ಸಿರುಮನು ಬೂದಿಹಾಳು ಕೋಟೆಯನ್ನು ಕಾಪಾಡಿಕೊಂಡು ನಮ್ಮ ಸರ್ವಬಲವನ್ನೂ ಕಡಿವನಲ್ಲಾ—ಇಂತಹ ಶೂರರಾದ ಮಕ್ಕಳನ್ನು ಪಡೆದ ಸಿರುಮನೇ ಧನ್ಯನು" ಎನ್ನುತ್ತಾ ದೀವಿಗೆಯ ಬೆಳಕನ್ನು ಹಿಡಿಸಿಕೊಂಡು ದುಗುಡದಿಂದ ಹಿಂದಿರುಗಿದನು. ಮಹಾಮಂಡಲೇಶ್ವರನೇ ಪರಾಕು! ಕಾಚನಾಯಕ ತಮ್ಮ ಮಲ್ಲಯ್ಯ ಮುಂತಾದ ಪಟುಭಟರೆಲ್ಲಾ ಮಡಿದರು. ಇನ್ನು ಕುಮಾರ ಮಲ್ಲಯ್ಯ ಮಾತ್ರ ಉಳಿದಿರುವನು. ಹೆಸರಾದ ಪಟುಭಟರೆಲ್ಲಾ ಸತ್ತರು. ನಾಳೆಯ ದಿನ ಕೋಟೆಯನ್ನು ವಶಮಾಡಿಕೊಳ್ಳಬಹುದೆಂದು ಭೈರವನು ಹೇಳಿದನು. ರಾಯನು ತನ್ನ ಬಿಡಾರಕ್ಕೆ ನಡೆದನು.

ಈ ಸುದ್ದಿಯನ್ನು ಅರ್ಧರಾತ್ರಿಯಲ್ಲಿ ಬೇವಿನ ಭಟರು ತಂದು ಸಿರುಮನಿಗೆ ಅರುಹಿದರು. ಸಿರುಮನು ಕುಮಾರ ಮಲ್ಲಯ್ಯನಿಗೆ ಇವನ್ನೆಲ್ಲಾ ಹೇಳಿ ರವಿ ಮೂಡದ ಮುನ್ನವೇ ಅರಿಬಲವು ಬಂದು ಮುತ್ತಬಹುದೆಂದು ತಿಳಿದು ಸಿರುಮಯ್ಯನು ಕಾಚನಾಯಕ ಮತ್ತು ತಮ್ಮ ಮಲ್ಲಣ್ಣನಿಗೆ ರಾತ್ರಿಯೇ ಕೊಂಡವನ್ನೇರಿಸಲು ಹವಣಿಸಿ ಎಂದು ತಿಳಿಸಿದನು. ಅರಮನೆಯಲ್ಲಿಯೇ ಕೊಂಡವನ್ನು ಮಾಡಿ

ಸುತ್ತೇನೆ. ನಿಮ್ಮೆಲ್ಲರನ್ನೂ ನನ್ನ ಕೈಯಿಂದಲೇ ಕೊಂದು ನಾನು ನರನಾಥನೊಡನೆ ಕಾದುವೆನು ಎನುತ್ತಾ ಕಿರಿಯ ತಮ್ಮ ಸೋಮಯ್ಯನನ್ನು ಹತ್ತಿರ ಕರೆದು ಅವನನ್ನು ಕಡಿಯಲು ಖಂಡೆಯವನ್ನು ಮೇಲಕ್ಕೆತ್ತಲು ತಾಯಿ ತಂದೆಗಳು ಕ್ಷಣ ಮಾತ್ರದಲ್ಲಿ ಕೈಹಿಡಿದು ನಿಲ್ಲಿಸಿ ನೀನು ಕಲಿಯುಗದ ಚೌಪಟ ಮಲ್ಲನೆಂಬುದು ಪುಸಿಯಲ್ಲ. ಮೊದಲು ಎಲ್ಲರ ಕೊಲನ್ನು ಮಾಡಬೇಕು. ಸೋಮಯ್ಯನನ್ನು ಕೊಲ್ಲಲಾಗದು ಎಂದು ನುಡಿದರು. ಅದನ್ನು ಕೇಳಿ ಕುಮಾರ ಮಲ್ಲಯ್ಯನು ತಮ್ಮಮತ್ತು ತಂಗಿಯರನ್ನು ಒಬ್ಬ ಯೋಗಿಗೆ ಒಪ್ಪಿಸಿ ಅವರಿಗೆ ಬಿಂದಿಗೆ ಹೊನ್ನನ್ನಿತ್ತು ಅವರನ್ನು ಸಂರಕ್ಷಿಸುವ ಕಾರ್ಯವನ್ನು ವಹಿಸಿ ಭಾಷೆಯನ್ನು ಪಡೆದನು. ಪ್ರಜೆ ಪರಿವಾರದವರನ್ನೂ ಸೆಟ್ಟಿ ವರ್ತಕರನ್ನೂ ಜಂಗಮರನ್ನೂ ಪೂಜಾರಿಗಳನ್ನೂ ಬೇರೆ ಸುಖವಾದ ಸ್ಥಳಕ್ಕೆ ತೆರಳ ಬೇಕೆಂದು ಬೇಡಿದನು. ಬಿರುದುಳ್ಳ ಭಂಟರನ್ನು ಕರೆದು ಜೋಳಿಗೆ ಹೊನ್ನನ್ನಿತ್ತು ನೀವೆಲ್ಲಿಯಾದರೂ ಸುಖದಿಂದ ಬಾಳಿರೆಂದು ಹೇಳಿ ವೀಳೆಯವಿತ್ತು ಕಳುಹಿಸಿದನು. ಸಿರುಮ ಭೂವರನೂ ರಾಣಿ ಚಿಕ್ಕಮ್ಮನೂ ಕಂಬನಿಗರೆಯುತ್ತಿರಲು ಪ್ರಜೆಗಳು ಊರಬಾಗಿಲಿಗೆ ಬಂದು ಸೋಮೇಶನಿಗೆ ಶರಣೆಂದು ಕತ್ತಲೆಯಲ್ಲಿ ಊರು ಬಿಟ್ಟು ಹುಳಿಯೂರಿನ ಪ್ರಾಂತವಿಡಿದು ಎಡವುತ್ತಾ ಮುಗ್ಗುತ್ತಾ ಮಕ್ಕಳನ್ನು ಸಂತವಿಡುತ್ತಾ ನಡೆಯುತ್ತಿರಲು ಕುಮಾರ ಮಲ್ಲಯ್ಯನು ಅವರ ಕಾವಲಾಗಿ ಮಾರಿಕಣಿವೆಯವರೆಗೆ ಬಂದು ಮುಂದಕ್ಕೆ ಹೋಗಿರೆಂದು ತಿಳಿಸಿ ವಿಭೂತಿಪುರಕ್ಕೆ ಹಿಂತಿರುಗಿದನು. ಊರಿನ ಮನೆಗಳಲ್ಲಿ ಮಂದಿ ಮಕ್ಕಳನ್ನುಯಾರಾದರೂ ಬಿಟ್ಟು ಹೋಗಿರುವರೋ ಎಂದು ಮನೆ ಮನೆಗಳನ್ನು ಹುಡುಕಿ ಯಾರನ್ನೂ ಕಾಣದೆ ತನ್ನ ಮನೆಗೆ ಬಂದನು. ತಂದೆ-ತಾಯಿಗಳಿಗೆ ನಮಸ್ಕರಿಸಿದನು. ಮಗನಿಗೆ ಹರಸಿ, ಆರುತಿಂಗಳಿಂದ ಪಟುಭಟರೂ ವೀರರಾದ ಮಕ್ಕಳೂ ಮಡಿದ ಯುದ್ಧದ ಪರಿಯನ್ನು ನೋಡಿದೆವು. ಇಂದು ನಿನ್ನ ಏಕಾಂಗಿ ಕಾಳಗವನ್ನು ನೋಡಿ ಸೋಮೇಶನ ಪಾದವನ್ನು ಸೇರುವೆವು ಎಂದು ನುಡಿದು ಉಪ್ಪರಿಗೆಯನ್ನೇರಿದರು. ಜಾಳಿಗೆ ಹೊನ್ನನ್ನು ಮಡಲಿಗೆ ಕಟ್ಟಿದನು ಮಲ್ಲಗಾಸೆಯನ್ನು ಬಿಗಿದುಟ್ಟನು. ನಗುತ್ತಾ ಕೋಟೆಯನ್ನೇರಿ ಮುಂದಿನ ಕಾಳಗಕ್ಕೆ ಸಿದ್ಧನಾದನು. ಮಲ್ಲನ ಏಕಾಂಗಿ ಕಾಳಗವನ್ನು ನೋಡಲು ದಿನಪನು ಮೂಡದೆಸೆಯಲ್ಲಿ ರಥವನ್ನೇರಿ ಕುಳಿತನು.

## ೧೩

ರವಿ ಮೂಡಿದನು ನರಸಿಂಗರಾಯನು ಮುಖಮಜ್ಜನಮಾಡಿಕೊಂಡು, ನವರತ್ನ ಭೂಷಿತನಾಗಿ ಯುದ್ಧಭೂಮಿಗೆ ಬಂದನು. ಸೇನಾ ಸಮೇತನಾಗಿ ಹೊರಟು ಬೂದಿಪುರದ ಕೋಟೆಯನ್ನು ಮುತ್ತಿ ಲಗ್ಗೆಗಾರಂಭಿಸಿದರು. ಭೂಮಿಪಾಲಕರು ಮೋಹರಿಸಿ ರಾಮನಾಥನ ಕೊತ್ತಳಕ್ಕೆ ಅಡರಿದರು. ಕುಮಾರ ಮಲ್ಲಯ್ಯನು ಭೀಮ ಗೊಡತಿಯಿಂದ ಹೊಡೆದು ಅವನನ್ನು ಕೆಡಹಿದನು. ಕೂಡಲೇ ನೂರಾರು ಭಟರು ಒಮ್ಮಿಗೇ ಕುಮಾರ ಮಲ್ಲಯ್ಯನನ್ನು ಮುತ್ತಿದರು. ಅವರನ್ನೆಲ್ಲಾ ಕರಿಯು ಕಬ್ಬಿನ ಕೋಲನ್ನು ತರಿವಂತೆ ಕತ್ತರಿಸಿದನು. ಹರಿಗೆಯ ಸುಭಟರು ಸನ್ನಿಗಾಳಕ್ಕೆ ಬರಲು ಅವರನ್ನೆಲ್ಲಾ ಕಂಗೆಡಿಸಿದನು. ಇದನ್ನು ನೋಡಿ ನರಸಿಂಗರಾಯನು ಈ ರೀತಿ ತನ್ನ ದಳವು ಮುರಿದು ಬೀಳುತ್ತಿರುವುದನ್ನು ಕಂಡು ಮರುದಿನ ನಾಯಕವಾಡಿಗಳೊಡನೆ ಕುದುರೆಯನ್ನೇರಿ ತಾನೂ ಕೋಟೆಯ ಬಳಿಗೆ ಬಂದನು. ಕೊತ್ತಳಕೊತ್ತಳಗಳನ್ನು ಹಿಡಿಯುತ್ತಾ ಬಾಣದ ಸುರಿಮಳೆಯನ್ನು ಕರೆದರು. ಒಂದು ಕೊತ್ತಳದಲ್ಲಿ ಕುಮಾರ ಮಲ್ಲಯ್ಯನು ಕಾದುತ್ತಿದ್ದರೆ ನರಸಿಂಗರಾಯನ ದಳದವರು ಮತ್ತೊಂದು ಕಡೆ ನುಗ್ಗುತ್ತಿದ್ದರು. ಕೊನೆಗೆ ಹೆಬ್ಬಾಗಿಲನ್ನು ಕಡಿದು ಊರೊಳಗೆ ಸಂಧಿಸಿದರು.

ಕುಮಾರ ಮಲ್ಲಯ್ಯನು ಗರುಡನಂತೆ ಹಾರಿಬಂದು ನೂರಾರು ಜನರನ್ನು ಕಡಿದು ಮಲಗಿಸಿದನು. ರಕ್ತದ ಕಾಲುವೆ ಹರಿಯಿತು. ಬಡನರಿಗಳು ಹುಲಿಯನ್ನು ಅಡರುವಂತೆ ಗಡಿಯ ಮನ್ನೆಯರು ಕುಮಾರ ಮಲ್ಲಯ್ಯನನ್ನು ಮುತ್ತಲು ಮದಗಜವು ಬಾಳೆಯ ವನವನ್ನು ಹೊಕ್ಕಂತೆ ಪಟುಭಟರನ್ನು ಕೊಂದನು. ಮಲ್ಲಯ್ಯನು ಮುಂದಿನ ಬಾಗಿಲ ಬಳಿ ಇರಲು ಹಿಂದಿನಿಂದ ಒಂದು ಬಾಣವು ಬಂದು ತಗುಲಿ ಗಾಯಮಾಡಿತು. ಖಂಡೆಯವನ್ನೇ ಬೀಸಲು ನರಸಿಂಗರಾಯರ ಬಲವು ಅಂಜಿ ಪಾಳೆಯಕ್ಕೋಡಿತು. ಮಂಡಿಯೂರಿಕುಳಿತ ಕುಮಾರ ಮಲ್ಲಯ್ಯನು ಗಾಯದ ನೋವಿನಿಂದ ಮೂರ್ಛೆಹೋದನು. ಸಿರುಮಯ್ಯ, ಚಿಕ್ಕಲದೇವಿ ಈರ್ವರೂ ಉಪ್ಪರಿಗೆಯಿಂದ ಇಳಿದು ಅರೆಜೀವದಲ್ಲಿದ್ದ ಕುಮಾರ ಮಲ್ಲಯ್ಯನನ್ನು ಕಂಡು ಶೋಕಿಸಿದರು. ಕುಮಾರ ಮಲ್ಲಯ್ಯನು ಜನನೀಜನಕರನ್ನು ಬಿಗಿದಪ್ಪಿ ನಮಸ್ಕರಿಸಿದನು. 'ನಿನ್ನ ಕದನವನ್ನು ಕಂಡು ದಣಿದೆವು. ಇನ್ನು ಈ ಲೋಕದೊಳಗಿರಬಾರದು' ಎಂದು ಹರ ಹರ! ಎನ್ನುತ್ತ ಅಗ್ನಿಕುಂಡದೊಳಗೆ ಧುಮುಕಿದರು. ಇದನ್ನು ಕಂಡು ಹಾ ಎಂದು ಕುಮಾರ ಮಲ್ಲಯ್ಯನು ಸೋಮಶೇಖರನೇ ಗತಿ ಎನ್ನುತ್ತಾ ಪ್ರಾಣವನ್ನು ಬಿಟ್ಟನು. ಸಿರುಮಭೂವರ, ರಾಣಿ ಚಿಕ್ಕಮ್ಮ, ಮತ್ತು ಕುಮಾರ ಮಲ್ಲಯ್ಯ ಇವರನ್ನುಸೊಸೆಯರು ಆರತಿಬೆಳಗುತ್ತಿರುವಾಗ ಸುರಾಂಗನೆಯರು ಸುರಲೋಕಕ್ಕೊಯ್ದು, ಕೈಲಾಸದಲ್ಲಿ ಪನ್ನಗಧರನನ್ನು ಕಂಡು ಪೂಜಿಸಲು, ಮೂರುಲೋಕಕ್ಕೆ ಉನ್ನತರಾದ

ವೀರರೆಂದು ಅವರಿಗೆ ನರಜನ್ಮವು ಸಾಕೆಂದು ಶಿವನು ಅವರಿಗೆ ಗಣಪದವಿಯನ್ನಿತ್ತನು. ಇತ್ತ ಭಸ್ಮಾಪುರದಲ್ಲಿ ಕಿಚ್ಚು ಗಗನವನ್ನಡರಲು, ಅವರಲ್ಲಿ ಸಿರುಮ ಮತ್ತು ರಾಣಿ ಚಿಕ್ಕಮ್ಮ ಬಿದ್ದರು ಎಂದು ರಾಯನು ಕೇಳಿ ವೀರರೆಂದು ಕೊಂಡಾಡುತ್ತಾ ಬಿಸು ಸುಯ್ದನು.

ಮಾರನೇ ದಿನ ಬೆಳಿಗ್ಗೆ ನರಸಿಂಗರಾಯನ ಭಟರು ಕರಿತುರಗವನೇರಿ ಬೂದಿಪುರ ವನ್ನು ಹೊಕ್ಕರು. ವೀರಮುಂಡಿಯಲ್ಲಿ ಲಾವಣಿಗೆಯಿಂದ ಇದ್ದ ಕುಮಾರ ಮಲ್ಲಯ್ಯನ ಹರಿಗೆಯ ಹೆಜ್ಜೆಗಳು ದಾಳಿಯಿಂದ ಝಲ್ಲೆಂದವು; ಚಿಮ್ಮುರಿಯ ಚಂದ್ರಗಾವಿಯ ಚಾವಣಿ ಹಾರಿತು. ವೀರಮಲ್ಲನು ನಿನ್ನೆ ಮಡಿದನೆಂದರು. ಇದು ಸುಳ್ಳು ಇನ್ನೂ ಬದುಕಿರುವನು ಎನ್ನುತ್ತಾ ಬೆದರಿದರು. ಇನ್ನು ನಮ್ಮಗಳನ್ನು ಬಿಡುವುದಿಲ್ಲ ಎನ್ನುತ್ತಾ ಓಡಿದರು. ರಾಯನು ಅದನ್ನು ಕಂಡು ಕೋಪವಮಾಡಿದನು. ಅವನಮಾನಗೊಂಡ ದೊರೆಗಳು ಈಗ ನಾವು ಹೋಗಿ ಲಾವಣಿಗೆಯನ್ನು ಇಳುಹುವೆವು ಎನ್ನುತ್ತಾ ಅಪ್ಪಣೆ ಬೇಡಿದರು. ಆ ವೇಳೆಗೆ ಒಂದು ರಣಹದ್ದು ಮಲ್ಲಯ್ಯನ ಶಿರದಮೇಲೆ ಕುಳಿತಿದ್ದನ್ನು ಕಂಡು ಹಿಗ್ಗಿ ಹೆಣದ ಬಳಿಗೆ ಬಂದು ತಲೆಯನ್ನು ಕೊಯಿದು ರಾಯನಿಗೆ ತಂದೊಪ್ಪಿಸಿ ದರು. ರಾಯನು ಅವರಿಗೆ ವೀಳೆಯ ಉಡುಗರೆಯನ್ನು ಕೊಟ್ಟು, ಬಾಯೊಳಗೆ ಹೊ ನ್ನನ್ನು ಹೊಯಿಸಿದನು. ಶಿರವನ್ನು ಕಂಡು ರಾಯನೇ ಮೊದಲಾಗಿ ಭೀತಿಗೊಂ ಡರು. ಲೀಲೆಗಾರರ ವಾಕ್ಯದಂತೆ ರಾಯನು ಮಲ್ಲಯ್ಯನ ಶಿರವನ್ನು ತರಿಸಿ ಪಟ್ಟಾ ವಳಿಯುಡಿಸಿ ಪಲ್ಲಕ್ಕಿಯೊಳಗೆ ಇಟ್ಟು ಪರಿಮಳಗಳನ್ನು ಪೂಸಿ ಮೆರವಣಿಗೆಯಿಂದ ಎಲ್ಲಾ ದೊರೆಗಳೂ ಹೊರಟರು ಬೂದಿಪುರಕ್ಕೆ ಬಂದು ಅಗ್ನಿಕೊಂಡದಲ್ಲಿ ಶಿರವನ್ನು ಹಾಕಿ ದಹಿಸಿದರು. ಅನಂತರ ಗುಡಿಯನ್ನು ಕಟ್ಟಿಸಿ ಪರ್ವವನ್ನು ಮಾಡಿ ಎಲ್ಲರನ್ನೂ ತೃಪ್ತಿಪಡಿಸಿದನು. ನರಸಿಂಗರಾಯನು ಪಟ್ಟಣವನ್ನು ಶೃಂಗರಿಸಿ ಪ್ರವೇಶಮಾಡಿ ಠಾಣ್ಯವನ್ನು ಹಾಕಿದನು. ಅನಂತರ ಹುಳಿಯಾರಿಗೆ ಹೋಗಿ ಅಲ್ಲಿಂದ ಪೆನುಗೊಂಡೆಗೆ ಹೊರಟುಹೋಗಿ ಅರಮನೆಯನ್ನು ಸೇರಿದರು. ಸತಿಯರು ಆರತಿಯನ್ನೆತ್ತಿದರು. ರತ್ನದ ಚಾವಡಿಗೆ ಬಂದು ಎಲ್ಲಾ ರಾಯರನ್ನೂ ಮನ್ನಿಸಿ ಅವರವರ ರಾಜ್ಯಕ್ಕೆ ಬೀಳ್ಕೊಟ್ಟನು. ಕಿರಿಯ ಮಗ ಸೋಮಯ್ಯನು ಪ್ರಾಪ್ತವಯಸ್ಕನಾದಮೇಲೆ ಬೂದಿ ಹಾಳಿಗೆ ಬಂದು ಹೂತಿಟ್ಟಿದ್ದ ಹಣದಿಂದ ಪಟ್ಟಣವನ್ನು ಹೊಸದಾಗಿ ಕಟ್ಟಿಸಿದನು. ತನ್ನ ಹಿರಿಯರಿಗೆ ಕೂಳು ಕಾರ್ಯವನ್ನು ಮಾಡಿ ಬಂಧುಗಳಿಗೆ ಸಂತೋಷಪಡಿಸಿದನು. ಕಂತುಹರ ಸೋಮೇಶನ ಕರುಣದಿಂದ ಸುಖ ಸಂಕಥಾ ವಿನೋದದಿಂದ ರಾಜ್ಯಭಾರ ಮಾಡುತ್ತಿದ್ದನು. ಸಿರುಮನ ಚರಿತ್ರೆಯನ್ನು ಕೇಳಿದವರು ಸೋಮೇಶನ ಕೃಪೆ ಯಿಂದ ಸ್ಥಿರವಾಗಿ ಬಾಳಲಿ. ಹರಭಕ್ತರು ಉಘೇ! ಉಘೇ! ಅನ್ನಿರಿ.

—:★:—

# ಶ ರ ಣ ಸಾ ಹಿ ತ್ಯ

## [ಪ್ರೌಢ ವರ್ಗದ ಮಾಸಿಕ]

| ಸಂಪಾದಕರು : | | ವಿಳಾಸ : |
| --- | --- | --- |
| ಆಸ್ಥಾನ ವಿದ್ವಾ೯, ಪಂಡಿತ ರತ್ನಂ | ಫೋ೯ | ಶರಣ ಸಾಹಿತ್ಯ ಕಾರ್ಯಾಲಯ |
| ಕೀರ್ತನಾಚಾರ್ಯ | 2734 | ರಂಗಸ್ವಾಮಿಗುಡಿ ಬೀದಿ, |
| ಬ. ಶಿವಮೂರ್ತಿ ಶಾಸ್ತ್ರೀ | | ಬೆಂಗಳೂರು-೨. |

★ ತಾವು ಜಗತ್ತಿನ ಎಲ್ಲ ಮತ-ಧರ್ಮಗಳ ರಹಸ್ಯವನ್ನು ತಿಳಿಯಬೇಕೆನ್ನುವಿರಾ?

★ ಭಾರತ ವರ್ಷದ ವಿಭೂತಿಗಳ, ದೇಶಭಕ್ತರ, ಪತಿವ್ರತೆಯರ, ಚರಿತ್ರೆಗಳನ್ನು ಅರಿಯಲಿಚ್ಛಿಸುವಿರಾ ?

★ ಸಾಹಿತ್ಯ. ಲಲಿತಕಲೆ ಇತಿಹಾಸ, ಸಮಾಜಶಾಸ್ತ್ರ ಮೊದಲಾದ ಪ್ರೌಢ ವಿಷಯಗಳ ಮೇಲೆ ವಿದ್ವಾಂಸರ ಮತ್ತು ವಿದುಷಿಯರ ಲೇಖನಗಳನ್ನು ಸಂಗ್ರಹಿಸಲು ಬಯಸುವಿರಾ ?

★ ಕವಿತೆ, ಜಾಣ್ಣುಡಿಗಳು, ವಿಶ್ವದ ವಿಚಿತ್ರಗಳು, ಟೀಕೆ-ಟಿಪ್ಪಣಿಗಳು ಮುಂತಾದುವನ್ನು ಓದಲು ಬಯಸುವಿರಾ ?

ಹಾಗಾದರೆ ಇಂದೇ 'ಶರಣ ಸಾಹಿತ್ಯ'ಕ್ಕೆ ಚಂದಾದಾರರಾಗಿರಿ.

★

೧. ಪೋಷಕರು: ೧೦೦ರೂ. ಗಳು.
ಇವರಿಗೆ ಮಾಸಿಕವೂ, ಗ್ರಂಥಮಾಲೆಯ ಪುಸ್ತಕಗಳೂ ಸಮರ್ಪಿಸಲ್ಪಡುವುವು.

೨. ಹಿತಚಿಂತಕರು: ೩೦ರೂ. ಗಳು.
ಇವರಿಗೆ ಮಾಸಿಕವು ಉಚಿತವಾಗಿ ಕೊಡಲ್ಪಡುವುದು.

೩. ಚಂದಾದಾರರು: ೬ರೂ. ಗಳು.
ಇವರಿಗೆ ಸಂಚಿಕೆಗಳು ಅಂಚೆಯ ಮೂಲಕ ಕಳುಹಿಸಲ್ಪಡುವುವು.



# ಸ್ವತಂತ್ರ ಕರ್ಣಾಟಕ ಪವರ್ ಪ್ರೆಸ್

★

ರಂಗಸ್ವಾಮಿಗುಡಿ ಬೀದಿ, ಬೆಂಗಳೂರು-೨.

**ಫೋ॥ 2734**

★ ನಿಮಗೆ ಕನ್ನಡ, ಇಂಗ್ಲಿಷ್, ಹಿಂದೀ ಮೊದಲಾದ ಭಾಷೆಗಳಲ್ಲಿ ಉತ್ತಮ ಮುದ್ರಣ ಬೇಕೆ?

★ ನಿಮಗೆ ನಿಮ್ಮ ಗ್ರಂಥಗಳು ಶುದ್ಧವಾಗಿಯೂ, ಸುಂದರವಾಗಿಯೂ, ಕಾಲಕ್ಕೆ ಸರಿಯಾಗಿಯೂ ಮುದ್ರಣವಾಗಲು ಬಯಕೆಯುಂಟೆ?

★ ಲಗ್ನ ಪತ್ರಿಕೆಗಳು, ವಿಜಿಟಿಂಗ್ ಕಾರ್ಡುಗಳು, ಬಿಲ್ ಪುಸ್ತಕಗಳು, ಪ್ರಸಿದ್ಧ ಪತ್ರಿಕೆಗಳು ಅಂದವಾಗಿ ಅಚ್ಚಾಗಬೇಕೆಂದು ನಿಮಗೆ ಮನಸ್ಸಿದೆಯೆ?

ಹಾಗಾದರೆ ಸ್ವತಂತ್ರ ಕರ್ಣಾಟಕ ಪವರ್ ಪ್ರೆಸ್ಸನ್ನು
ಒಮ್ಮೆ ಸಂದರ್ಶಿಸಿರಿ.

—:★:—

## ಸ್ಕೂಲುಗಳಿಗೆ ಮಂಜೂರಾಗಿದೆ

ನೀವು ತಾ॥ ೮ ೮-೩೯ರಲ್ಲಿ "ಶರಣ ಸಾಹಿತ್ಯ" ಮತ್ತು "ಸ್ವತಂತ್ರ ಕರ್ಣಾಟಕ" ಪತ್ರಿಕೆಗಳನ್ನು ಸ್ಕೂಲುಗಳಿಗೆ ಮಂಜೂರು ಮಾಡಬೇಕೆಂದು ಬರೆದ ಪತ್ರದ ಪ್ರಕಾರ ನಿಮ್ಮ "ಶರಣ ಸಾಹಿತ್ಯ" ಮತ್ತು "ಸ್ವತಂತ್ರ ಕರ್ಣಾಟಕ" ವಾರ ಪತ್ರಿಕೆಯನ್ನೂ ಮೈಸೂರು ದೇಶದಲ್ಲಿ ಪ್ರೈಮರಿ ಸ್ಕೂಲುಗಳಿಗೆ ವಿನಾ ಉಳಿದ ಹೈ, ಮಿಡ್ಲ್ ಮತ್ತು ನಾರ್ಮಲ್ ಸ್ಕೂಲುಗಳಿಗೆ ತರಿಸಬಹುದೆಂದು ಶಿಫಾರಸು ಮಾಡಲಾಗಿದೆ.

ಡೈರೆಕ್ಟರಿಗಾಗಿ

[ಮೈಸೂರು ಶಿಕ್ಷಣ ಶಾಖಾಧಿಕಾರಿಗಳ ಟಿ. ಬಿ. ಸಿ.
೨೬-೨೯-೪೦ ತಾ॥ ೨೨ನೇ ಸೆಪ್ಟಂಬರ್ ೧೯೩೯ರ ಹುಕುಂ ಪ್ರಕಾರ]